ಅರಮನೆಯಿಂದ ಸೆರೆಮನೆ ಸೇರಿದ

ಆಹವಮಲ್ಲ

ಪಂಡಿತ

# ಜವಾಹರಲಾಲ ನೆಹರು

ಇವರ

## ಜೀವನಚರಿತೆ

---

೧೯೩೦

ಬೆಲೆ ೮ ಆಣೆ

ಅರಮನೆಯಿಂದ ಸೆರೆಮನೆ ಸೇರಿದ

ಆಹವಮಲ್ಲ

ಪಂಡಿತ

# ಜವಾಹರಲಾಲ ನೆಹರು

ಇವರ

## ಜೀವನಚರಿತ್ರೆ

---

ಲೇಖಕರು:— ಶ್ರೀ. ಮ. ಗೋವರ್ಧನರಾಯರು ಧಾರವಾಡ

ಮೊದಲನೆಯ ಆವೃತ್ತಿ

೧೦೦೦ ಪ್ರತಿಗಳು

೧೯೩೦

ಬೆಲೆ ೮ ಆಣೆ

# ಮುನ್ನುಡಿ

ಪಂಡಿತ ಜವಾಹರಲಾಲ ನೆಹರೂ ಇವರು ನಿಸ್ಸೀಮ ದೇಶಪ್ರೇಮದ ಪ್ರತ್ಯಕ್ಷ ಮೂರ್ತಿಗಳು, ಹಿಂದುಸ್ಥಾನದ ರಾಜಕೀಯ ಕ್ಷಿತಿಜದ ಮೇಲೆ ಹೊಸದಾಗಿ ಉದಿತವಾದ ತೇಜಃಪುಂಜ ಬಾಲಸೂರ್ಯರು, ಭಾರತೀಯ ತರುಣರ ಕಂಠಮಣಿಗಳು. ಅವರ ದೇಶಾಭಿಮಾನವು ಹುಟ್ಟುಗುಣವು. ಅವರಿಗೆ ಪರದಾಸ್ಯವೆಂಬುದು ಅಸಹ್ಯವಾದ ಸಂಗತಿಯು. ಪಾರತಂತ್ರ್ಯವೆಂಬ ಕಲ್ಪನೆಯು ಕೂಡ ಅವರಿಗೆ ಅತ್ಯಂತ ತ್ವೇಷವನ್ನುಂಟುಮಾಡುವದು. ಸಂಪೂರ್ಣ ಸ್ವಾತಂತ್ರ್ಯವೆಂಬ ತಮ್ಮ ಧ್ಯೇಯವನ್ನು ಸಾಧಿಸಲಿಕ್ಕೆ ಅವರು ಬೇಕಾದ ತ್ಯಾಗವನ್ನು ಮಾಡಲಿಕ್ಕೆ, ಸಾಹಸವನ್ನು ಕೈಕೊಳ್ಳಲಿಕ್ಕೆ ಸಿದ್ಧರು. ಒಮ್ಮೆ ತಮ್ಮ ಧ್ಯೇಯವನ್ನು ಅವರು ತಮ್ಮ ಕಣ್ಣುಮುಂದೆ ನಿಚ್ಚಳವಾಗಿಟ್ಟುಕೊಂಡ ಮೇಲೆ ಯಾರಿಗೂ ಸೊಪ್ಪುಹಾಕುವವರಲ್ಲ. ಪೂರ್ಣ ಸ್ವಾತಂತ್ರ್ಯದ ಗೊತ್ತುವಳಿಯನ್ನು ಈಗಲೇ ಮುಂದೆ ಇಡಬೇಡಿರಿ ಎಂದು ಮಹಾತ್ಮಾ ಗಾಂಧಿಯವರು ಹೇಳಿದರೂ ಕೂಡ ಅವರು ಕಾಂಗ್ರೆಸ್ಸಿನಲ್ಲಿ ಕೇಳಲಿಲ್ಲ. ಲಖನೌದಲ್ಲಿ ತಮ್ಮ ತಂದೆಯವರನ್ನು ಕೂಡ ಅವರು ಜಾಹೀರ ರೀತಿಯಿಂದ ಈ ವಿಷಯದಲ್ಲಿ ವಿರೋಧಿಸಿದರು. ಹೀಗಿದ್ದರೂ ಅವರಲ್ಲಿ ಎಳ್ಳಷ್ಟೂ ಉದ್ಧಟತನವಿಲ್ಲ, ವಿನಯದ ಅಭಾವವಿಲ್ಲ, ಪ್ರೇಮದ ಕೊರತೆ ಇಲ್ಲ. ಮಹಾತ್ಮಾ ಗಾಂಧಿಯವರ ವಿಷಯಕ್ಕೆ ಅವರ ಅಂತಃಕರಣದಲ್ಲಿ ಅತ್ಯಂತ ಆದರವೂ ಪೂಜ್ಯಭಾವವೂ ಇರುವದು. ತಂದೆಯವರ ಕೂಡ ನುಡಿಯುವಾಗ, ನಡೆಯುವಾಗ, ಅವರ ಬಾಲವೃತ್ತಿಗನುಸರಿಸಿದ ಸರಲ ಸ್ವಭಾವವನ್ನು ನೋಡಿದರೆ ಎಲ್ಲರಿಗೂ ಆನಂದವಾಗುವದು.

ಅನ್ಯಾಯ, ಅನೀತಿ, ಜುಲುಮೆ ಇವು ಅವರಿಗೆ ಕ್ಷಣಹೊತ್ತೂ ಸಹನವಾಗುವದಿಲ್ಲ. ಇವುಗಳನ್ನು ನೋಡಿದ ಕೂಡಲೆ, ಕೇಳಿದ ಕೂಡಲೆ ಅವರ ಕಣ್ಣು ಕೆಂಪೇರುವವು. ಮನಸ್ಸು ಕುದಿಯಲಾರಂಭಿಸುವದು. ಅವರ ಕಾರ್ಯದಕ್ಷತೆಯು ಅದ್ವಿತೀಯವಿರುವದು. ಕಾಣಲಿಕ್ಕೆ ಅವರ ವರ್ತನವು ಒಮ್ಮೊಮ್ಮೆ ಕಠೋರ ಕಂಡರೂ ಸಹಕಾರಿಗಳ ಕೂಡ ಅವರು ಅತಿಶಯ ಪ್ರೇಮದಿಂದ, ತಾಳ್ಮೆಯಿಂದ ನಡಕೊಳ್ಳುವರು.

ರಾಜಕೀಯ ವಿಷಯದಲ್ಲಿ ಅವರು ಸ್ಪಷ್ಟವಾಗಿ ಸಮಾಜಸತ್ತಾವಾದಿಗಳು. ಕರ್ನಾಟಕಕ್ಕೆ ಅವರು ವಿಶೇಷ ಪ್ರಿಯರಾಗಲಿಕ್ಕೆ ಇನ್ನೊಂದು ಮಹತ್ವದ ಕಾರಣವಿರುವದು. ಭಾಷಾನುಗುಣ ಪ್ರಾಂತರಚನೆಗೆ ಅವರು ಸಂಪೂರ್ಣ ಬೆಂಬಲ ಕೊಟ್ಟಿದ್ದಲ್ಲದೆ ಕರ್ನಾಟಕ ಏಕೀಕರಣದ ಪ್ರಶ್ನೆಗೆ ಅವರು ಅತಿಶಯ ಸಹಾಯ ಮಾಡಿದರು. ನೆಹರು ರಿಪೋರ್ಟಿನಲ್ಲಿ ಕರ್ನಾಟಕದ ಬಗ್ಗೆ ಇಷ್ಟು ಗೌರವಪೂರ್ಣ ಉಲ್ಲೇಖ ಮತ್ತು ಕರ್ನಾಟಕ ಏಕೀಕರಣದ ಬಗ್ಗೆ ಇಷ್ಟೊಂದು ಸ್ಪಷ್ಟ ಅಭಿಪ್ರಾಯವು ಬರಲಿಕ್ಕೆ ಅವರೇ ಸಹಾಯಕರಾದರು.

ಇಂಥ ಮಹಾಪುರುಷನ ಚರಿತ್ರವು ಕನ್ನಡಿಗರ ಕೈಸೇರುತ್ತಿರುವದು ಆನಂದದ ಸಂಗತಿಯು. ಲೇಖಕರೂ ಒಳ್ಳೇ ನುರಿತವರು, ಜವಾಹರಲಾಲರ ಬಗ್ಗೆ ಉತ್ಕಟ ಪ್ರೇಮವಿದ್ದವರು. ಇದನ್ನು ಹುರಿಕಟ್ಟಾದ ಭಾಷೆಯಲ್ಲಿ ಬರೆದಿರುವರು. ಇದನ್ನು ಓದಿ ಕರ್ನಾಟಕದ ತರುಣರು ಹುರುಪುಗೊಂಡು, ಈ ಚರಿತ್ರ ನಾಯಕನು ಯಾವ ಬಗೆಯಿಂದ ರಾಷ್ಟ್ರಸೇವೆಯ ಯಜ್ಞಕುಂಡದಲ್ಲಿ ಹಾರಿಕೊಂಡನೋ ಅದೇ ಬಗೆಯಿಂದ ಹಾರಿಕೊಂಡು 'ಕರ್ನಾಟಕದ ತರುಣರು' ಎಂಬ ಹೆಸರನ್ನು ಮುಂದೆ ತರುವರೆಂದು ಆಶಿಸುವೆನು.

ತಾ॥ ೨೨-೧೨-೩೪
ಧಾರವಾಡ

ರಂಗನಾಥ ರಾಮಚಂದ್ರ ದಿವಾಕರ

ಧುರಧೀರನಾದ

ಅರಮನೆಯಿಂದ ಸೆರೆಮನೆಗೆ ಹೋದ

# ಪಂಡಿತ ಜವಾಹರಲಾಲ ನೆಹರು

ಇವರ

# ಜೀವನ ಚರಿತ್ರೆಯು.

## ಬಾಲ್ಯ, ತಾರುಣ್ಯ ಮತ್ತು ವಿದ್ಯಾಭ್ಯಾಸ

ಆರ್ಯರು ಭಾರತಕ್ಕೆ ಬಂದಬಳಿಕ ಅನೇಕರು ಹಿಂದುಸ್ಥಾನದ ಮೇಲೆ ಏರಿಬಂದರು, ಸಾಗಿಬಂದರು. ಕೆಲವರು ನೆಲೆನಿಂತರು, ಹಲವರು ಮಲೆತುಹೋದರು, ಧನದೌಲತ್ತುಗಳನ್ನು ದೋಚಿಕೊಂಡು ಹೋದರು. ಹೋದವರು ಹೋದರಷ್ಟೇ? ಆದರೆ ನಿಂತವರನ್ನು ಆರ್ಯರು ಒಂದೇ ತಮ್ಮ ತೋಳ್ಬಲದಿಂದ ಗೆದ್ದು ತಮ್ಮವರನ್ನಾಗಿ ಮಾಡಿ ಸುಮ್ಮನಿರಿಸಿದರು. ಅಥವಾ ತಮ್ಮ ಅತ್ಯುತ್ಕಟ ಆದರ್ಶ ಮತ್ತು ಸಂಸ್ಕೃತಿಗಳ ಬಲ್ಮೆಯಿಂದ ಸೋಲಿಸಿ ತಮ್ಮ ಧರ್ಮಾನುಯಾಯಿಗಳಾಗಿ ಮಾಡಿದರು. ಮುಸಲ್ಮಾನರು ಕ್ರಿಸ್ತಶಕದ ಎಂಟನೇ ಶತಮಾನದ ಕೊನೆಯಲ್ಲಿ ಹಿಂದುಸ್ಥಾನದ ಮೇಲೆ ದಾಡುಮಾಡಿ ಬರಹತ್ತಿದರು. ಅವರಲ್ಲಿಯೂ ಕೆಲವರು ಸಿಕ್ಕದ್ದನ್ನು ಸೆಳೆದುಕೊಂಡು ಬಾಚಿಕೊಂಡು ಹೋದರೂ ಕೆಲವರು ಮಾತ್ರ ಇಲ್ಲಿಯ ಫಲವತ್ತಾದ ವೈಭವವುಳ್ಳ ನಾಡಿನಲ್ಲಿ ನಿಂತು ತಾವು ತಮ್ಮ ಭುಜಬಲಪರಾಕ್ರಮದಿಂದ ಗೆದ್ದುಕೊಂಡ ರಾಜ್ಯವನ್ನು ತಮ್ಮ ನೆಲೆವೀಡನ್ನಾಗಿ ಮಾಡಿದರು. ಆದರೆ ಇವರಿಗೆಲ್ಲ ಇಲ್ಲಿ ಬರುವಮುಂಚೆಯೇ ಒಂದು ಧರ್ಮ

ವಿತ್ತು, ಒಂದು ಸಂಸ್ಕೃತಿಯಿತ್ತು. ಮೊದಲು ಬಂದ ವಿದೇಶೀಯರಿಗೂ ಇವರಿಗೂ ಇಲ್ಲಿಯೇ ಬಿಡುತ್ತಿತ್ತು. ಈ ಮುಸಲ್ಮಾನರಿಗೆ ಮಾತ್ರ ತಮ್ಮ ಉಚ್ಚಸಂಸ್ಕೃತಿಯ ಸಳವಿನಲ್ಲಿ ಕೆಡುಹಿ ಭಾರತಜನಾಂಗದಲ್ಲಿ ಕರಗಿಸಿ ಬೆರೆಯಿಸಿ ಒಂದಾಗಿಸುವುದು ಆರ್ಯರಿಂದ ಒಮ್ಮೆಲೇ ಸಾಧ್ಯವಾಗಲಿಲ್ಲ. ಭಾರತದ ಇಂದಿನ ಬೀಳುಸ್ಥಿತಿಗೆ ಅಂದಿನಿಂದಲೇ ಆರಂಭವಾಯಿತೆಂದು ಹೇಳಬಹುದು. ಈ ಪರಸ್ಪರವಿರೋಧಿಗಳಾದ ಎರಡು ಧರ್ಮಸಂಸ್ಕೃತಿಗಳ ಸೆಣಸಾಟವೇ ಇಬ್ಬರ ನ್ಯಾಯ ಮೂರನೇಯವನಿಗೆ ಆಯವೆಂಬಂತೆ, ನಾಡನ್ನು ಹರಿದು ಹಂಚಿ ಒಕ್ಕಲಿಕ್ಕ ಮೂರನೆಯವರ ಕೈಯಲ್ಲಿಟ್ಟಿತು. ಅದಿರಲಿ.

ಈ ಮೇರೆಗೆ ಮುಸಲ್ಮಾನರು ಆರ್ಯರಿಂದ ಕಾಶ್ಮೀರವನ್ನು ಕಸಿದುಕೊಂಡು ಅಲ್ಲಿ ತಮ್ಮ ದರ್ಪವನ್ನು ಮೆರೆಯಿಸಹತ್ತಿದರು. ಅವರಿಗೆ ತಮ್ಮ ಧರ್ಮಪ್ರಸಾರದಲ್ಲಿ ಶ್ರದ್ಧೆ ಹೆಚ್ಚು, ಲವಲವಿಕೆಹೆಚ್ಚು. ಅದಲ್ಲದೆ ಅವರ ಧರ್ಮಗುರುವಿನ ಕಟ್ಟಪ್ಪಣೆಯೂ ಹಾಗೆಯೇ ಇದೆ. ಅಂದಬಳಿಕ ಕೇಳುವದೇನು? ಹೆರವರ ಉಪಟಳವಿಲ್ಲದೆ ಶಾಂತಿತುಷ್ಟಿಪುಷ್ಟಿಗಳಿಂದ ಬೆಳಗುತ್ತಿದ್ದ ನಾಡಿನಲ್ಲಿ ಒಮ್ಮೆಲೇ ಕತ್ತಲೆಯು ಕವಿದಂತಾಯಿತು. ಪರಬಲಶಾರ್ದೂಲರಾದ ಕ್ಷತ್ರಿಯರ ಕತ್ತಿಗಾಗಲಿ ಬ್ರಾಹ್ಮಣರ ಬುದ್ಧಿಬಲಕ್ಕಾಗಲಿ ಬಂದವರನ್ನು ಆಳತೆಯಲ್ಲಿಟ್ಟು ಓಂದುಗಳನ್ನು ಓಮ್ಮೆಟ್ಟಿಸದಂತೆ ನೋಡಿಕೊಳ್ಳುವುದಾಗಲಿಲ್ಲ. ಆದ್ದರಿಂದ ತಮ್ಮ ಕ್ರಮಕ್ಕನುಸರಿಸಿ ಮಹಮ್ಮದೀಯರು ನಾಡಿನಲ್ಲಿ ಮಲೆತುನಿಂತು "ಒಂದು ಕೈಯಲ್ಲಿ ಖಡ್ಗ ಇನ್ನೊಂದರಲ್ಲಿ ಕುರಾಣ" ವನ್ನು ಹಿಡಿದು ತಮ್ಮ ಧರ್ಮವನ್ನು ಹಬ್ಬಿಸಲನುವಾದರು. ಮಾರಾಂತು ಬರುವ ಮುಸಲ್ಮಾನರ ಆರ್ಪಿಗೆ ಅಳುಕಿ ಒತ್ತಾಯಕ್ಕೆ ಸಿಲುಕಿ ದಿಕ್ಕುಗಾಣದೆ ಎಷ್ಟೋ ಮನೆತನದವರು ಕಾಶ್ಮೀರದಿಂದ ನಡೆದು ಕಾಲಿಗೆ ಬುದ್ಧೀಹೇಳಿದರು. ಭಾರತದ ಉಳಿದ ಭಾಗವೆಲ್ಲ ಹಿಂದೂರಾಜರ ಕೈಕೆಳಗೇ ಇದ್ದುದರಿಂದ ಅವರು ಅಲ್ಲಿಂದ ಹೊರಟು ಪಂಜಾಬ-ಸಂಯುಕ್ತಪ್ರಾಂತಗಳಲ್ಲಿ ಬಂದು ತಳವೂರಿದರು. ಅಂಥ ಹಲವು ಮನೆತನಗಳಲ್ಲಿ ಸುಪ್ರಸಿದ್ಧವಾದ ನೆಹರುಮನೆತನವು ಒಂದು. ಕಾಶ್ಮೀರದಿಂದ ಹೊರಡುವಾಗ ಪರದಾಸ್ಯ ಪರಧರ್ಮಗಳೆರಡೂ ಬೇಡೆಂದು ಬಂದವರೇನೋ ಹೌದು. ಉಪಾಯಗಾಣದೆ ಸ್ವಾಭಿಮಾನದಿಂದ ಸಾರಿಬಂದವರೇನೋ ಸರಿಯೇ. ಮುಸಲ್ಮಾ

ನರ ರಾಜದಂಡವು ಅವರನ್ನು ಬೆನ್ನಟ್ಟಿ ಬಂದೇ ಬಂತು. ಆದರೆ ಕಾಶ್ಮೀರ ದಲ್ಲಿ ಕಂಡಂತೆ " ಕತ್ತಿಯೋ ಕುರಾಣವೋ " ಎಂಬ ಭೀಕರ ಸ್ವರೂಪವು ಮಾತ್ರ ಅದಕ್ಕಿರಲಿಲ್ಲ. ಆದ್ದರಿಂದ ಮನಸ್ಸಿನ ವಿರುದ್ಧವಾದವರೂ ಆತುರದಿಂದ ಮಹಮ್ಮದೀಯ ರಾಜರ ಪ್ರಜೆಗಳಾಗಿ ಹಾಗೂ ಹೀಗೂ ಇವರು ಕಾಲ ಕಳೆಯಹತ್ತಿದರು. ಮುಂದೆ ಇವರು ಇಸ್ಲಾಮಧರ್ಮಸಂಸ್ಕೃತಿಗಳನ್ನರಿತು ಅದರಲ್ಲಿ ಗುಣಗ್ರಾಹಕತೆಯಿಂದ ಕಲ್ಯಾಣಕರವಾದ ಸಂಗತಿಗಳನ್ನು ಸ್ವೀಕ ರಿಸಿ ನಾಡಿಗೂ ನೀಡಿದರು. ಆದರೆ ಈ ಎಲ್ಲ ಇಸ್ಲಾಮ ಸಂಸ್ಕೃತಿಯ ಸಾರ ಗ್ರಹಣವು ಕಾಶ್ಮೀರದಿಂದ ಬಂದ ಪ್ರತಿಯೊಂದು ಮನೆಯವರಿಗೂ ಸಾಮಾ ನ್ಯವಾಗಿರಲಿಲ್ಲ. ಕಾಶ್ಮೀರದ ಬ್ರಾಹ್ಮಣರಲ್ಲಿರುವ ಅಪ್ರತಿಮ ಬುದ್ಧಿವಂತಿ ಕೆಯು ಇವರಲ್ಲಿಯೂ ಇದ್ದುದರಿಂದ ಇವರೆಲ್ಲರೂ ' ಪಂಡಿತ ' ಎಂಬ ಉಪ ಪದ ಅಥವಾ ಬಿರುದನ್ನು ತಮ್ಮ ಹೆಸರಿನ ಹಿಂದೆ ಜೋಡಿಸಲು ತಪ್ಪು ವದೇ ಇಲ್ಲ.

ನೆಹರುಗಳಂತೆ ಮಾಲವೀಯರ ಮನೆತನದವರೂ ಕಾಶ್ಮೀರದವರೇ ಎಂದು ಹೇಳುತ್ತಾರೆ. ಆದರೆ ನೆಹರುಗಳಷ್ಟು ಪರಧರ್ಮಪ್ರವಾಹವು ಇವರ ಮೇಲೆ ಆದಂತಿಲ್ಲ. ಇವರೂ ' ಪಂಡಿತ ' ಎಂಬ ತಮ್ಮ ಪೂರ್ವದ ವಿದ್ಯಾವೈಭವಸೂಚಕವಾದ ಬಿರುದನ್ನು ಬಿಟ್ಟಿಲ್ಲ. ಈ ಕಾಶ್ಮೀರದ ಪಂಡಿ ತರು ತಮ್ಮ ಬುದ್ಧಿಯ ಬೆಳಕನ್ನು ಹಿಂದೀ ರಾಜಕಾರಣ ಮತ್ತು ರಾಷ್ಟ್ರ ನಿರ್ಮಾಣದಲ್ಲಿ ವಿಲಕ್ಷಣ ರೀತಿಯಿಂದ ಉಪಯೋಗಿಸಿದ್ದಾರೆ. ಈ ವರೆಗೆ ದೇಶವು ಆರಿಸಿದ ಕೊಂಗ್ರೆಸ್ಸಿನ ಅಧ್ಯಕ್ಷರಲ್ಲಿ ಐದಾರು ಜನರು ಈ ಪಂಗಡಕ್ಕೆ ಸೇರಿದವರೇ ಆಗಿದ್ದಾರೆ. ಅದಲ್ಲದೆ ಇಂದಿಗೂ ನಾಡಿನ ನೇತೃತ್ವವೂ ಸೂತ್ರ ಗಳೂ ಇವರ ಕೈಯಲ್ಲಿಯೇ ಇರುತ್ತವೆ. ಹಿಂದೀರಾಷ್ಟ್ರೀಯಸಭಾ ( ಕೊಂ ಗ್ರೆಸ್ ) ಹಿಂದೂಮಹಾಸಭಾ ಮತ್ತು ಪ್ರಾಗತಿಕರ ಚಳವಳ ಮುಂತಾ ದವುಗಳ ಸೂತ್ರಚಾಲಕರು ಇವರೇ ಆಗಿರುವರು. ಇದೆಲ್ಲ ಅವರ ಸ್ವಾರ್ಥ ತ್ಯಾಗ, ಧರ್ಮವೀರತನ, ಅಪ್ರತಿಮಪಾಂಡಿತ್ಯ ಮುಂತಾದವುಗಳ ದ್ಯೋತ ಕವಲ್ಲವೇ ? ಇಂದು ಮವಾಳರ ( Liberal Federation ) ಮುಂದಾ ಳುಗಳಾದ ಸರ್, ತೇಜಬಹದ್ದೂರ ಸಪ್ರೂಗಳೂ ಇದೇ ಕಾಶ್ಮೀರ ಬ್ರಾಹ್ಮ ಣರ ಕೂಟಕ್ಕೆ ಸೇರಿದವರು.

ಇಂದಿಗೆ ಸುಮಾರು ಎಪ್ಪತ್ತು ವರ್ಷಗಳ ಹಿಂದೆ ಪಂಡಿತ ಗಂಗಾಧರ, ನೆಹರುಗಳು ದಿಲ್ಲಿಯಲ್ಲಿ ಕೊತವಾಲರಾಗಿ ಕೆಲಸಮಾಡುತ್ತಿದ್ದರು. ಪಂಡಿತ ಮೋತಿಲಾಲ ನೆಹರುಗಳು ಅವರಮಗ. ತಂದೆಯು ತೀರಿ ಒಂದೆರಡು ತಿಂಗಳನಂತರ ಇವರು ಹುಟ್ಟಿದರು. ಆದ್ದರಿಂದ ಪಿತೃಪ್ರೇಮದ ಸವಿಗೆ ಅವರು ಎರವಾದರು. ಕೊತವಾಲರಾಗಿದ್ದ ಗಂಗಾಧರರು ಯೋಗ್ಯ ದಂಡಧರರಾಗಿ ದರ್ಪದಿಂದ ಕೆಲಸವನ್ನು ಮಾಡುತ್ತಿದ್ದರು. ತಂದೆಯ ಈ ತೇಜೋವಂತ ಸ್ವಭಾವವು ಮಗನಲ್ಲಿಯೂ ಮಗನಿಂದ ಮೊಮ್ಮಗನಲ್ಲಿಯೂ ಒಂದಕ್ಕೆ ಇಮ್ಮಡಿ ಮುಮ್ಮಡಿಯಾಗಿ ಮೆರೆಯುತ್ತಿದೆ. ಅವರ ಮುಂದಾಳುತನವನ್ನು ಮಲೆತು ನೋಡುವ ವೀರನಾರು?

ಪಂಡಿತ ಮೋತಿಲಾಲರ ವಿದ್ಯಾಭ್ಯಾಸವು ಅಲ್ಹಾಬಾದದಲ್ಲಿಯೇ ಆಯಿತು. ಅಲ್ಲಿಯೇ ಅವರು ಪದವೀಧರರಾದರು. ಮುಂದೆ ಅವರು ಕಾನಪುರದಲ್ಲಿ ವಕೀಲಿಯ ಉದ್ಯೋಗವನ್ನು ಪ್ರಾರಂಭಿಸಿದರು. ಮೊದಲಿನಿಂದಲೂ ಅವರ ಮೇಲೆ ಶ್ರೀಸರಸ್ವತಿಯರಿಬ್ಬರೂ ಕೃಪಾದೃಷ್ಟಿಯನ್ನಿಟ್ಟಿದ್ದರು. ಸ್ವಲ್ಪ ಕಾಲದಲ್ಲಿಯೇ ಅವರು ಒಬ್ಬ ಹೆಸರಾದ ವಕೀಲರಾದರು. ಅವರ ಕೀರ್ತಿಯು ನಾಲ್ಕೂ ನಿಟ್ಟಿನಲ್ಲಿ ಹಬ್ಬಿತು. ತಮ್ಮ ನ್ಯಾಯಪಾಂಡಿತ್ಯಕ್ಕೂ ಕುಶಲತೆಗೂ ಕಾನಪುರವೆಂಬ ಕ್ಷೇತ್ರವೂ ಬಹು ಚಿಕ್ಕದೆಂದು ಅವರಿಗೂ ಅವರ ಸ್ನೇಹಿತರಿಗೂ ಕಂಡುಬಂದದ್ದರಿಂದ ಅವರು ಹೆಚ್ಚು ತಡಮಾಡದೆ ಪ್ರಯಾಗಕ್ಕೆ ಬಂದು ನೆಲೆನಿಂತು ಅಲ್ಲಿಯೇ ಉದ್ಯೋಗವನ್ನು ಸ್ಥಿರವಾಗಿ ನಡೆಸಿದರು. ಪ್ರಯಾಗವು ಸಂಯುಕ್ತ ಪ್ರಾಂತದ ರಾಜಧಾನಿ, ವಿದ್ಯಾಕೇಂದ್ರ, ವ್ಯಾಪಾರೋದ್ಯಮಗಳ ಬೀಡು. ಇಲ್ಲಿ ಅವರ ವೃತ್ತಿಯು ವೈಭವೋನ್ಮುಖವಾಯಿತು. ಅವರು ತಮ್ಮ ೨೧ನೇ ವಯಸ್ಸಿನಲ್ಲಿ ವಕೀಲಿಯ ಕೆಲಸವನ್ನು ಕೈಕೊಂಡರು. ಸನ್ ೧೮೮೬ರಲ್ಲಿ ಅವರು ಪ್ರಯಾಗಕ್ಕೆ ಬಂದು ಸೇರಿದರು. ಮತ್ತು ಇಲ್ಲಿಯೇ ಮಿರಗಂಜಿನಲ್ಲಿ ನಮ್ಮ ಚರಿತ್ರನಾಯಕನಾದ ಪಂಡಿತ ಜವಾಹರಲಾಲರು ಸನ್ ೧೮೮೯ನೇ ನವಂಬರ ೧೪ನೇ ತೇದಿಗೆ ಜನ್ಮ ತಾಳಿದರು. ಇವರು ಹುಟ್ಟಿದ ಮರುವರ್ಷವೇ ಮೋತೀಲಾಲರು ಮುರಾದಾಬಾದಿನ ನ್ಯಾಯಾಧೀಶರಾದ ಕುವರ ಪರಮಾನಂದಜೀಯವರ ಬಂಗಲೆಯನ್ನು ಕ್ರಯಕ್ಕೆ ಕೊಂಡರು, ಮತ್ತು ಅದನ್ನು ಸರ್ವ ಭೋಗವಿಲಾಸಸಾಮಗ್ರಿ

ಯಿಂದ ಸುಸಜ್ಜಿತವಾಗಿ ಮಾಡಿದರು. ಅದರ ಹೆಸರಿಗೆ ತಕ್ಕಂತೆ ಅದು "ಆನಂದಭವನ" ವೇ ಆಯಿತು. ಇದೇ ಆನಂದಭವನವು ಈಗ ಸ್ವರಾಜ್ಯ ಭವನವಾಗಿದೆ. ಇಂದು ಈ ನೆಹರುಗಳ ಇಡೀ ಕುಟುಂಬವೇ ರಾಜಕಾರಣ ದಲ್ಲಿ ತೊಡಗಿ ಸ್ವಾತಂತ್ರ್ಯಸಮರದಲ್ಲಿ ಸೇರಿರುವದರಿಂದ ಮುಂಚಿನಂತೆ ರಾಜರನುಭವಿಸುವ ಭೋಗವಿಲಾಸಾದಿಗಳ ಕಡೆಗೆ ಅವರು ಕಣ್ಣೆತ್ತಿ ಸಹ ಕಾಣರು. ಆದ್ದರಿಂದ 'ಆನಂದಭವನ' ದಲ್ಲಿ ಈಗ ಮುಂಚಿನ ಮಹಿಮೆ ಯು ಕೇವಲ ಹೊಳಪು ಮಾತ್ರ ಉಳಿದಿರುವುದು. ಆದರೂ ನಾ ಮುಂದೆ ನೀ ಮುಂದೆ ಎಂದು ಮೆರೆಯುವ ಅನೇಕ ಅರಮನೆಗಳನ್ನು ಸಹ ನಾಚಿ ಸುವ ವೈಭವವೂ ನಿಸ್ಸೀಮ ಸೌಂದರ್ಯವೂ ಒಂದಾನೊಂದು ಕಾಲದಲ್ಲಿ ಅಲ್ಲಿ ಮನೆಮಾಡಿದ್ದವೆಂಬುದೇನೂ ಸುಳ್ಳಲ್ಲ.

ಇಂಥ ಲೆಕ್ಕಮಿತಿಯಿಲ್ಲದ ವೈಭವವುಳ್ಳ ವಂಶದಲ್ಲಿಯೇ ಜವಾಹರಲಾ ಲರು ಜನ್ಮವೆತ್ತಿದರು. ಪಾಶ್ಚಾತ್ಯಪದ್ಧತಿಯ ಬೆಡಗಿಗೆ ಮನಸೋತು ಆ ಬಗೆಯಲ್ಲಿ ತಮ್ಮ ಬಾಳ್ವೆಯ ಇರವಿನಲ್ಲಿ ಮಾರ್ಪಾಡುಗಳನ್ನುಂಟುಮಾಡಿ ದವರಲ್ಲಿ ಕಾಶ್ಮೀರ ಬ್ರಾಹ್ಮಣರ ಪಂಗಡದ ಪೈಕಿ ಇವರೇ ಮೊದಲಿಗರು. ಆ ರೀತಿಯಿಂದ ಇರುವವರಲ್ಲಿ ಅವರು ಶ್ರೇಷ್ಠರೆಂದು ಎಣಿಸಲ್ಪಡುತ್ತಿದ್ದರು. ಜವಾಹರಲಾಲರ ಬಾಲ್ಯವು ಈ ತರಹದ ಸುಖಗಳಲ್ಲಿ ಸಂದುಹೋಯಿತು. ಶಿಶುಸಂಗೋಪನಕ್ಕೆ ಐರೋಪ್ಯದ ದಾದಿಯರು (Nurses) ನೇಮಿಸಲ್ಪ ಟ್ಟಿದ್ದರು. "ಆನಂದಭವನ" ದಲ್ಲಿ ನಡೆಯುತ್ತಿರುವ ಸುಖಸಂಪತ್ತುಗಳ ಹೆಚ್ಚಳಕ್ಕಾಗಿ ಪಂ. ಮೋತಿಲಾಲರು ಅಲ್ಲಿ ವಿದ್ಯುದ್ದೀಪಗಳನ್ನು ತರಿಸಿ ದ್ದರು. ಈಗಿನ ಕಾಲದಲ್ಲಿ ವಿದ್ಯುದ್ದೀಪಗಳು ಸಾಮಾನ್ಯವಾಗಿ ಎಲ್ಲ ಕಡೆಯ ಲ್ಲಿಯೂ ತರಿಸಲು ಸುಲಭಸಾಧ್ಯವಾಗಿರುವದರಿಂದ ನಮಗೆ ಅಷ್ಟೊಂದು ಅವುಗಳ ಮಹತ್ವವು ತೋರುವದಿಲ್ಲ. ಸುಪುತ್ರನಾದ ಜವಾಹರನು ನಿತ್ಯವೂ ವಿದ್ಯುದ್ದೀಪಗಳ ಬಲ್ಬುಗಳನ್ನು (Bulbs) ನೆಲಕ್ಕಪ್ಪಳಿಸಿ ಒಡೆದುಬಿಡು ವನು. ಅವನು ತನ್ನ ಹಟಮಾರಿತನವನ್ನು ಬಿಡುತ್ತಿರಲ್ಲ ಏನು ಮಾ ಡುವುದು? ಒಬ್ಬನೇ ಮಗ. ಮನೆಮಂದಿಗೆಲ್ಲ ಅಚ್ಚುಮೆಚ್ಚು; ತಾಯಿತಂದೆಗ ಮುದ್ದು ಮುದ್ದು. ಶೈಶವದಲ್ಲಿ ಅವರ ಈ ಆಟಗಳನ್ನು ನೋಡುವಾಗ " ಪಾಪದ ಪ್ರದರ್ಶನವನ್ನು ಮಾಡುವ, ಅರ್ವಾಚೀನಸಂಸ್ಕೃತಿಯ ಆದ

ರ್ಶವಾದ,ಯಂತ್ರಗಳಮೇಲೆ ಹಗೆತನದಿಂದ ಧಾಳಿಮಾಡುತ್ತಿರುವನೋ ಏನೋ'' ಎಂಬಂತೆ ತೋರಿ ಮಹಾತ್ಮಾ ಗಾಂಧಿಯವರಿಗೆ ಅದೊಂದು ಚಂದವೇ ಆಗಿ ಕಾಣಬಹುದಾಗಿತ್ತು. ಆದರೆ ಪಂ. ಮೋತೀಲಾಲರು ಮಗನನ್ನು ಅಂಧಪ್ರೇಮದಿಂದ ನೋಡಿದವರಲ್ಲ. ಮಗನ ಮೇಲಿನ ಮಮತೆಯಿಂದ ಅವರು ಅವನ ಬಾಲವಿದ್ಯಾಭ್ಯಾಸಗಳಿಗೆ ತಡಮಾಡಲೇ ಇಲ್ಲ. ಕಾಲಕ್ಕೆ ತಕ್ಕಂತೆ ವ್ಯವಸ್ಥೆಯನ್ನಿಟ್ಟಿದ್ದರು. ಆಟನೋಟಗಳ ಆಸಕ್ತಿಯಲ್ಲಿ ಪಾಠಪಟ್ಟಿಗಳನ್ನು ಮರೆಯಲಿಲ್ಲ. ಜವಾಹರಲಾಲರ ತೀರ ಮೊದಲಿನ ಗುರುಗಳು ಎಫ್. ಟಿ. ಬ್ರುಕ್ಸ್ ಎಂಬವರು. ಇವರು ಬ್ರಹ್ಮವಿದ್ಯಾವಂತರ (Theosophy) ವರ್ಗಕ್ಕೆ ಸೇರಿದವರಾದುದರಿಂದ ಭಗವದ್ಗೀತೆಯನ್ನು ಚನ್ನಾಗಿ ಓದಿ ಮನನ ಮಾಡಿದವರಿದ್ದರು. ಗೀತೆಯ ಮೇಲೆ ಅವರಿಗೆ ಅತ್ಯಂತ ಗೌರವ. ಬ್ರಹ್ಮವಿದ್ಯಾಪ್ರಸಾರದ ಪ್ರೇಮಪೂರ್ವಕ ಸೇವಕರಾದುದರಿಂದ ಅವರ ಗೀತಾ ಮತ್ತು ಬೇರೆ ಹಲವು ಪುಸ್ತಕಗಳ ಅನುವಾದಗಳನ್ನು ಇಂಗ್ಲಿಷಿನಲ್ಲಿ ಮಾಡಿರುವರು. ಗೀತೆಯನ್ನು ಗೌರವಿಸುವ ಈ ಆಂಗ್ಲಶಿಕ್ಷಕರ ಶಿಕ್ಷಣದ ಪರಿಣಾಮವು ಜವಾಹರಲಾಲರ ಮೇಲೆ ಚನ್ನಾಗಿ ಆಯಿತು. ಅವರು ಈಗಲೂ ತಮ್ಮ ಪ್ರವಾಸಗಳಲ್ಲಿ ಸಂಗಡ ಗೀತೆಯನ್ನು ತಪ್ಪಿಸುವದಿಲ್ಲ. ಎಫ್. ಟಿ. ಬ್ರುಕ್ಸರಿಗೆ ಬ್ರಹ್ಮವಿದ್ಯಾಸಂಗಡದವರೊಡನೆ ಕೆಲವೊಂದು ಸಂಗತಿಯಲ್ಲಿ ತೀವ್ರ ಮತಭೇದಗಳಾಗಿ ಬೆಳೆದು ಕೊನೆಗೆ ಅವರು ರಸಕಸಿಯಿಂದ ಬ್ರಹ್ಮವಿದ್ಯಾಸಮಾಜದ ಸಂಬಂಧವನ್ನೇ ತೊರೆದರು. ಇವರು ಜವಾಹರನ ಶಿಕ್ಷಕರಾಗಿ ೧೯೦೧ರಿಂದ ೧೯೦೪ರ ವರೆಗೆ ಇದ್ದರು. ಇವರ ಶಿಕ್ಷಣದಿಂದ ಜವಾಹರಲಾಲರ ಮನಸ್ಸಿನಮೇಲೆ ಬ್ರಹ್ಮವಿದ್ಯೆಯ ಪರಿಣಾಮವೂ ನಾಸ್ತಿಕತೆಯ ಒಲವೂ ಉಂಟಾದವೆಂದು ತೋರುತ್ತದೆ. ಮುಂದೆ ಅವರು ತಮ್ಮ ಶಿಕ್ಷಣ ಸಮಾಪ್ತಿಯಾದನಂತರ ಇಲ್ಲಿಗೆ ಬಂದು ಡಾ. ಆನಿಬೆಸಂಟರು ಹೊರಡಿಸಿದ ಹೋಮ ರೂಲ್ (Home Rule) ಚಳವಳದಲ್ಲಿ ಪ್ರಾಮುಖ್ಯವಾದ ಪಾತ್ರವನ್ನು ವಹಿಸಿದ್ದನ್ನು ನೋಡಿದರೆ ಇದೇ ಪರಿಣಾಮದಿಂದಲೇ ಎಂದು ಊಹಿಸಬಹುದು. ಬ್ರುಕ್ಸರ ಬಳಿಕ, ಪ್ರಯಾಗ ಹೈಸ್ಕೂಲಿನ ಮುಖ್ಯಾಧ್ಯಾಪಕರಾದ ಮಿ. ಗೋರ್ಡನರು ಇವರ ಶಿಕ್ಷಕರಾಗಿದ್ದರು. ಜವಾಹರಲಾಲರಿಗೆ ಅತ್ಯಂತ ಉತ್ತಮ

ವಾದ ವಿದ್ಯಾಭ್ಯಾಸವು ಕೊಡಲ್ಪಡಬೇಕೆಂದು ಮೋತೀಲಾಲರ ಸತತ ಪ್ರಯತ್ನ. ಈ ಬಗ್ಗೆ ಅವರು ಎಳ್ಳಷ್ಟು ಆಲಸ್ಯವನ್ನು ತೋರಿಸಲಿಲ್ಲ. ಚಿಕ್ಕಂದಿನಲ್ಲಿಯೇ ರಾಷ್ಟ್ರಾಭಿಮಾನವನ್ನು ಬೆಳೆಯಿಸುವ ಪ್ರಸಂಗಗಳನ್ನು ಪ್ರಯೋಜನ ಮಾಡದೆ ಹಾಗೇ ದೂಡಿಬಿಡಲಿಲ್ಲ. ತಾವು ಹೋಗುವ ಸಭೆಸಮಾಜಗಳಿಗೆ ಮಗನನ್ನು ನೋಟಕನನ್ನಾಗಿ ತಪ್ಪದೆ ಕರಕೊಂಡು ಹೋಗುವರು. ಈ ಮೇರೆಗೆ ಪಂ. ಜವಾಹರಲಾಲರು ತಾವು ಇನ್ನೂ ೧೪ ವರ್ಷದವರಿರುವಾಗಲೇ ಮೊದಲಿನ ಬಾರಿ ಕಾಂಗ್ರೆಸ ಅಧಿವೇಶನವನ್ನು ಮುಂಬಯಿಯಲ್ಲಿ ನೋಡಿದರು. ಆ ಸಲ ಸರ್ ಹೆನ್ರಿ ಕೊಟನ್ನರು ಅಧ್ಯಕ್ಷ ರಾಗಿದ್ದರು. ಆದರೆ ಅದೇ ಸಭಾಪತಿಸ್ಥಾನದಲ್ಲಿ ಅಂದಿನಿಂದ ೨೬ ವರ್ಷ ಗಳನಂತರ ತಾನೂ ವಿಜೃಂಭಣೆಯಿಂದ ವಿರಾಜಿಸುವೆನೆಂದು ಆ ಬಾಲಕ ನಿಗೆ ಕಲ್ಪನೆಯಾಗಿರಬಹುದೋ? ತನ್ನ ನಾಡಿನ ನಿಡಿದಾದ ಕಟ್ಟುನಿಟ್ಟಿನ ಪ್ರಸಂಗದಲ್ಲಿ ಪ್ರಜೆಗಳು ತನ್ನನ್ನೇ ಆರಿಸಿ ನೇತೃತ್ವದ ಸೂತ್ರಗಳನ್ನು ತನ್ನ ಕೈಯಲ್ಲಿರಿಸುವರೆಂದು ಆಗ ಆತನು ಹೇಗೆ ತಿಳಿವನು?

೧೯೦೪ ರಲ್ಲಿ ಪಂ. ಮೋತೀಲಾಲರು ಮಗನನ್ನು ಶ್ರೇಷ್ಠ-ಶಿಕ್ಷಣ ಕ್ಕೋಸ್ಕರ ಇಂಗ್ಲಂಡಕ್ಕೆ ಕಳಿಸಬೇಕೆಂದು ನಿಶ್ಚಯಿಸಿದರು. ಆದರೆ ಆ ಎಳೆ ವಯಸ್ಸಿನ ಹುಡುಗನನ್ನು ಒಬ್ಬನನ್ನೇ ಅಷ್ಟು ದೂರ ದೇಶಕ್ಕೆ ಕಳುಹಿಸಿ ಅಲ್ಲಿಡುವದೆಂದರೆ ಮೋತೀಲಾಲರಿಗೆ ಬೇಡಬೇಡೆನಿಸಿತು. ಅದರಲ್ಲಿಯೂ ಒಬ್ಬನೇ ಒಬ್ಬ ಮಗ. ಅವನು ಹೋದರೆ ತಾಯಿತಂದೆಗಳಿಗೆ 'ಆನಂದ ಭವನ' ವು ಭಣಭಣಿಸುವುದು. ಅದರಲ್ಲಿ ಏನೂ ಸೊಗಸೆನಿಸದು. ಆದರೂ ಕರ್ತವ್ಯದಲ್ಲಿ ಮರುಳು ಮೋಹವನ್ನು ತೋರಬಾರದೆಂದು ತಿಳಿದು ಕೂಡಲೆ ತಂದೆತಾಯಿಗಳೂ ಅಕ್ಕನೂ ಕೂಡಿಕೊಂಡು ಇಂಗ್ಲಂಡಕ್ಕೆ ಪ್ರಯಾಣ ಬೆಳಿಸಿದರು. ಅಲ್ಲಿ ಹೋಗಿ ಜವಾಹರನನ್ನು ಹ್ಯಾರೋ ವಿದ್ಯಾಲಯದಲ್ಲಿ ಕಲಿಯಲಿಕ್ಕೆ ಇಟ್ಟುಬಂದರು. ಹ್ಯಾರೋ ವಿದ್ಯಾಲಯವು ಬಹಳ ಪ್ರಾಚೀನ ಕಾಲದ್ದು. ಅದಲ್ಲದೆ ಹೆಚ್ಚಳ ಹೊಂದಿದ ಹೆಸರಿನದು. ಈ ಸಂಸ್ಥೆಯು ಲಂಡನ ನಗರದಿಂದ ಹತ್ತು ಮೈಲುಗಳ ಮೇಲೆ ಮಿಡ್ಲಸೆಕ್ಸದ ಒಂದು ಸುದರವಾದ ಬೆಟ್ಟದ ಮೇಲಿದೆ. ಅದಕ್ಕೆ ಹ್ಯಾರೋ ಆನ್ ದಿ ಹಿಲ್ ( Harrow on the hill ) ಎಂದೂ ಹೇಳುವರು. ಇದರಲ್ಲಿ ಈ ವರೆಗೆ

ಅನೇಕ ಆಂಗ್ಲರಾಜಕಾರಣಪಟುಗಳೂ ಪಂಡಿತರೂ ವಿದ್ಯಾಭ್ಯಾಸ ಮಾಡಿ ರುವರು. ಹಿಂದುಸ್ಥಾನದ ವೈಸರಾಯರಾದ ಮಾರ್ಕ್ವಿಸ್ ಆಫ್ ವೆಲ್ಲೆಸ್ಲಿ, ಲಾರ್ಡ ಡಾಲಹೌಸಿ, ಲಿಟನ್, ಹಾರ್ಡಿಂಜ, ಇವರ ಶಿಕ್ಷಣವು ಇಲ್ಲಿಯೇ ಆಯಿತು. ಅದೇ ಮೇರೆಗೆ ಪಾಮರ್ಸ್ಟನ್, ರೋಬರ್ಟಪೀಲ್, ಸ್ಟಾನ್ಲೆ ಬಾಲ್ಡ್ವಿನ್, ಶೆರಿಡ್ಯಾನ್, ಬೈರನ್, ಕಾರ್ಡಿನಲ್ ಮ್ಯಾನಿಂಗ್, ಸರ ವಿಲಿ ಯಮ್ ಜೋನ್ಸ, ದಿ ಅರ್ಲ ಆಫ್ ಶಾಫ್ಟ್ಸಬರಿ, ವಿನ್ಸ್ಟನ್ ಚರ್ಚಿಲ್, ಹಾಲ್ ರೀಡ್, ಟ್ರೊಲೋಪ್, ಕಾಲ್ವರ್ಲಿ ಮುಂತಾದ ದಿಗಂತಕೀರ್ತಿಯು ತರಾದ ವಿದ್ವಾಂಸರೂ ಕವಿಗಳೂ ಆಂಗ್ಲ ಮಂತ್ರಿಗಳೂ ಅಲ್ಲಿಯೇ ಶಿಕ್ಷಣ ಹೊಂದಿದರು. ಇಂಥಲ್ಲಿಯೇ ಹಿಂದುಸ್ಥಾನದ ಭಾವೀ ರಾಷ್ಟ್ರೀಯ ಮುಂ ದಾಳುವೂ ಸಭಾಧಿಪತಿಯೂ ಶಿಕ್ಷಣ ಪಡೆದದ್ದೊಂದು ಅತ್ಯಂತಾಶ್ಚರ್ಯದ ಸಂಗತಿಯಲ್ಲವೇ? ವಿಲಕ್ಷಣ ಯೋಗಾಯೋಗವಿದು! ಮತ್ತು ಈ ಸಮ ಯಕ್ಕೆ ಅವರ ಸಹಪಾಠಿಗಳಾಗಿ ಕಪರ್ಥಲದ ಟಿಕಾ ಸಾಹೇಬರೂ, ಬಡೋ ದೆಯ ರಾಜಕುಮಾರರಾದ ಜಯಸಿಂಗರೂ, ನ್ಯಾ. ಡಾ. ಶಹಾ ಮಹಮ್ಮದ ಸುಲೇಮಾನ ಇವರೂ ಇದ್ದರು.

ಇಲ್ಲಿಯ ಪ್ರವೇಶ ಪರೀಕ್ಷೆಯನ್ನು ಪಾಸಾದ ಬಳಿಕ ಜವಾಹರಲಾ ಲರು ಸುಪ್ರಸಿದ್ಧವಾದ ಟ್ರಿನಿಟಿ ಕಾಲೇಜಿಗೆ ಉಚ್ಚ ಶಿಕ್ಷಣಕ್ಕಾಗಿ ನಡೆ ದರು. ಕೆಂಬ್ರಿಜ್ಜದಲ್ಲಿ ಇವರ ಸಹಾಧ್ಯಾಯಿಗಳಾಗಿ ಖಾಸದಾರ ಶರ್ವಾನಿ ಗಳೂ, ಮಿ. ಖ್ವಾಜಾ, ಬಿಹಾರದ ಡಾ. ಮಹಮೂದರೂ ಮತ್ತು ಡಾ. ಸೈಫುದ್ದೀನ ಕಿಚ್ಲುಗಳೂ ಇದ್ದರು. ಇದೇ ಡಾ. ಕಿಚ್ಲುಗಳೇ ಮೊನ್ನೆ ಲಾಹೋರ ಕಾಂಗ್ರೆಸ್ಸಿಗೆ ಜವಾಹರಲಾಲರನ್ನು ಸ್ವಾಗತೀಕರಿಸಿದವರು. ಸೃಷ್ಟಿಶಾಸ್ತ್ರ, ರಸಾಯನ ಶಾಸ್ತ್ರ, ಜಂತುವಿಜ್ಞಾನ ಶಾಸ್ತ್ರ ಮತ್ತು ವನ ಸ್ಪತಿ ಶಾಸ್ತ್ರಗಳು ಜವಾಹರಲಾಲರ ಪ್ರೀತ್ಯಾಸ್ಪದ ವಿಷಯಗಳು. ಇವು ಗಳಲ್ಲಿ ಇವರು ಬಿ ಎ. ಪದವಿಯನ್ನು ದೊರಕಿಸಿದರು. ಮತ್ತು ಇವರ ಪ್ರಾವಿಣ್ಯವನ್ನು ಕಂಡು ನಿಯಮದಂತೆ ಫೀ ಮಾತ್ರ ತೆಗೆದುಕೊಂಡು ವಿಶ್ವ ವಿದ್ಯಾಲಯದವರು ಎಮ್. ಎ. ದ ಪದವಿಯನ್ನು ಕೊಟ್ಟರು. ಬಿ. ಎ ಪರೀಕ್ಷೆಯಲ್ಲಿ ಇವರು ಎರಡನೇ ವರ್ಗದಲ್ಲಿ (Hons) ಮಾನದೊಂದಿಗೆ ಉತ್ತೀರ್ಣರಾದರು ಟ್ರಿನಿಟಿ ಕೋಲೇಜಿನ ವಿದ್ಯಾಭ್ಯಾಸವಾದ ಬಳಿಕ

ಅವರು ಸನ್ ೧೯೧೨ ರಲ್ಲಿ ಇನ್ನರ ಟೆಂಪಲಿನ ಬ್ಯಾರಿಸ್ಟರ ಪರೀಕ್ಷೆಯನ್ನು ಕೊಟ್ಟು ಮಾತೃಭೂಮಿಗೆ ಮರಳಿ ಬಂದರು.

ಇಂಗ್ಲಂಡದಲ್ಲಿರುವಾಗ ಜವಾಹರಲಾಲರು ಭಾರತ ರಾಜಕಾರಣವನ್ನಾಗಲಿ ಇನ್ನಿತರ ಚಳವಳಿಗಳನ್ನಾಗಲಿ ದುರ್ಲಕ್ಷಿಸುತ್ತಿದ್ದಿಲ್ಲ. ಅವರು ಅತ್ಯಂತ ಪ್ರೇಮದಿಂದ ಪ್ರತಿಯೊಂದು ವಿಷಯದಲ್ಲಿ ಕೈಹಾಕುತ್ತಿದ್ದರು. ತಾನು ವಿಲಾಯತಿಗೆ ಹೊರಡುವ ಮುಂಚೆ ಭಾರತ ರಾಷ್ಟ್ರೀಯ ಸಭೆಯ ಅಧಿವೇಶನವನ್ನೊಮ್ಮೆ ಅವರು ಕಣ್ಣಾರೆ ಕಂಡಿದ್ದರು.

ಒಮ್ಮೆ ಕೊಂಗ್ರೆಸ್ ಅಧಿವೇಶನವನ್ನು ನೋಡಿದರೆ ಸಾಕು. ಎಂಥ ಪುಕ್ಕನೂ ವೀರನಾಗಬಹುದು! ದೇಶದ್ರೋಹಿಯೂ ಅಂತಃಕರಣದಲ್ಲಿ ತನ್ನ ತಪ್ಪಿಗಾಗಿ ಕಳವಳಗೊಳ್ಳುವನು! ಅಂದಮೇಲೆ ಜವಾಹರಲಾಲರಂಥ ತರಳನ ಮೇಲೆ ಅದಾವ ಪರಿಣಾಮವಾಗಿರಬಹುದು? ಇಂಗ್ಲೆಂಡಿನಲ್ಲಿ ಅವರು ಹಿಂದುಸ್ಥಾನದ ಸಂಗತಿಗಳನ್ನು ಅದಷ್ಟು ಆಸಕ್ತಿಯಿಂದ ನೋಡಲು ಇದೇ ಕಾರಣವಿರಬೇಕು. ಕೊಂಗ್ರೆಸ್ಸಿನ ಪ್ರಭಾವವೇ ಅಂತಹದು! ಅವರು ಅಲ್ಲಿ ವಿದ್ಯಾರ್ಥಿಯಾಗಿರುವಾಗಲೇ ಪಂಜಾಬದ ಕೇಸರಿಯೆನಿಸಿ ಭಾರತದಲ್ಲೆಲ್ಲ ಗರ್ಜಿಸಿ ಗುಡುಗಾಡಿ ಅತ್ಯುಚ್ಚ ರಾಷ್ಟ್ರವೀರರಾಗಿ ಹೋದ ಲಾಲಾಲಜಪತರಾಯರನ್ನು ಗಡಿಪಾರುಮಾಡಿ ಅಟ್ಟಿಬಿಟ್ಟಿದ್ದು. ಆಗಿನ ಅಲ್ಲಿಯ ಹಿಂದೀ ವಿದ್ಯಾರ್ಥಿಗಳೆಲ್ಲರಿಗೂ ಬಹು ಬೇಜಾರವಾಯಿತು. ಇತ್ತ ಸ್ವದೇಶದಲ್ಲಿ ಲೋಕಮಾನ್ಯ ಬಾಲಗಂಗಾಧರ ತಿಲಕರೂ ಬಿಪಿನ ಚಂದ್ರ ಪಾಲರೂ ಡಾ. ಅನಿಬೆಸೆಂಟರೂ ಬಹಳ ಜೋರಿನಿಂದ ಸ್ವರಾಜ್ಯದ ಚಳವಳವನ್ನು ನಡೆಸುತ್ತಿದ್ದರು. ವಂಗಭಂಗದ ಚಳವಳದ ಪರಿಣಾಮವೂ ಅವರ ಮೇಲೆ ಆಗದೆ ಇರಲಿಲ್ಲ.

ಲಾಲ ಬಾಲ ಪಾಲರೆಂಬ ತ್ರಿಮೂರ್ತಿಗಳ ವೀರಗರ್ಜನೆಯಿಂದ ತರುಣರ ತಂಡವೆಲ್ಲ ಸುಪ್ತಾವಸ್ಥೆಯಿಂದೆಚ್ಚತ್ತು ಕಣ್ಣುಬಿಟ್ಟು ನೋಡಹತ್ತಿತು. ಮತ್ತು ರಾಷ್ಟ್ರಸೇವೆಗಾಗಿ ಅದಷ್ಟು ಹೆಚ್ಚು ರೀತಿಯಿಂದ ಹೆಣಗಾಡಹತ್ತಿತು. ಕೇಂಬ್ರಿಜದೊಳಗಿನ ಭಾರತ ವಿದ್ಯಾರ್ಥಿಗಳಲ್ಲಿಯೂ ಈ ಬಗ್ಗೆ ಚರ್ಚೆತರ್ಕಗಳು ಆಗೇ ಆಗುತ್ತಿದ್ದವು. ಇದೇ ಸಮಯಕ್ಕೆ ಮದನಲಾಲ ಧಿಂಗ್ರಾನು ಕರ್ಜನ್ ವಾಯಲೀಲಾನ ಕೊಲೆಮಾಡಿದನು. ಒಟ್ಟಿನ ಮೇಲೆ ವಾತಾವರಣವು ಆಗ ಶಾಂತವಾಗಿರಲಿಲ್ಲ. ಇಂಗ್ಲಂಡದಂಥ ಸ್ವತಂತ್ರ ರಾಷ್ಟ್ರ

ದಲ್ಲಿದ್ದದ್ದರಿಂದ ಜವಾಹರಲಾಲರ ಮನಸ್ಸಿನಲ್ಲಿ ಸ್ವಾತಂತ್ರ್ಯಪ್ರೇಮವು ಬೇರೂರಿತು. ಅದಲ್ಲದೆ ಹಿಂದುಸ್ಥಾನ ಮತ್ತು ಇಂಗ್ಲಂಡಗಳ ಕೀಳುಮೇಲುಭಾವದ ದೃಶ್ಯವು ಅವರೆದುರಿಗೆ ಅಲ್ಲಿ ಹೆಜ್ಜೆಹೆಜ್ಜೆಗೂ ನಡೆಯುತ್ತಿದ್ದುದರಿಂದ ಅವರ ಸ್ವಾಭಿಮಾನದ ಹೃದಯಕ್ಕೆ ಬರೆಕೊಟ್ಟಂತಾಗಿ ಮನಸ್ಸಿನಲ್ಲಿಯೇ ಮರುಗುತ್ತಿದ್ದರು. ಅವರು ವಿದ್ಯಾಭ್ಯಾಸಕ್ಕಾಗಿ ಎಂಟು ವರ್ಷ ಇಂಗ್ಲೆಂಡಿನಲ್ಲಿದ್ದಾಗ ಭಾರತ ಸ್ವಾತಂತ್ರ್ಯದ ಕಲ್ಪನೆಯ ಬೀಜವು ಅವರ ಮನದಲ್ಲಿ ಬಿತ್ತಲ್ಪಟ್ಟಿತು.

ಇಂಗ್ಲಂಡಿನಿಂದ ಬಂದವರೇ ಜವಾಹರಲಾಲರು ಪ್ರಯಾಗದಲ್ಲಿ ತನ್ನ ತಂದೆಯ ಮಾರ್ಗದರ್ಶಿತ್ವದಲ್ಲಿ ವಕೀಲವೃತ್ತಿಯನ್ನಾರಂಭಿಸಿದರು. ಅದೇ ವರ್ಷ ಅಂದರೆ ೧೯೧೨ರಲ್ಲಿ ಅವರು ಬಂಕಿಪುರದಲ್ಲಿ ರಾ। ರಾ। ಮುಧೋಳಕರರ ಅಧ್ಯಕ್ಷತೆಯಲ್ಲಿ ಸೇರಿದ ಕೊಂಗ್ರೆಸಿಗೆ ಹೋಗಿದ್ದರು. ಪ್ರಯಾಗದಲ್ಲಿ ಅವರು ವಕೀಲರಾಗಿ ಕೆಲಸಮಾಡಹತ್ತಿದ್ದರೂ ವಕೀಲಿಯಲ್ಲಿ ಅವರ ಹೆಸರು ಅಷ್ಟೊಂದು ಚಮಕಿಸಲಿಲ್ಲ. ಇದರ ಕಾರಣವೇನೂ ದೂರವಿಲ್ಲ. ವಕೀಲಿಯಲ್ಲಿ ಯಾವನು ಸೂರ್ಯನಂತೆ ಪ್ರಖರನಾಗಿಯೂ ಪ್ರಕಾಶಯುತನಾಗಿಯೂ ಮೆರೆಯುತ್ತಿದ್ದನೋ ಅಂಥ ಮೋತಿಲಾಲರ ಮುಂದೆ ಇನ್ನೂ ಹೊಸಬರಾದ ಜವಾಹರಲಾಲರ ಬೆಳಕು ಬೀಳಲಿಲ್ಲ. ಎಂಥೆಂಥ ನ್ಯಾಯಪಂಡಿತರೂ ಮೋತಿಲಾಲರ ಕಾಯಿದೆಕಾನೂನಿನ ಜಾಣತನಕ್ಕೆ ಮೆಚ್ಚಿ ತಲೆಬೊಗ್ಗಿಸುವರು. ಆದರೆ ಜವಾಹರಲಾಲರು ಬರಬರುತ್ತ ತಮ್ಮ ವೃತ್ತಿಯಲ್ಲಿ ಕೀರ್ತಿಯನ್ನು ಪಡೆಯುಹತ್ತಿದರು. ಎಷ್ಟೋ ದೊಡ್ಡ ದೊಡ್ಡ ತಾಲೂಕುದಾರರು ಖಟ್ಲೆಗಳನ್ನು ಸಹ ಅವರು ಕುಶಲತೆಯಿಂದ ಗೆದ್ದಿದ್ದರು. ಈ ಕ್ಷೇತ್ರದಲ್ಲಿ ಅವರು ಇನ್ನೂ ಹೆಚ್ಚು ಪ್ರಸಿದ್ಧಿಯನ್ನೂ ಪ್ರಭಾವವನ್ನೂ ಪಡೆಯುವವರಿದ್ದರು. ಆದರೆ ಮಹಾತ್ಮರ ಅಪ್ಪಣೆ ಮತ್ತು ಕಾಂಗ್ರೆಸ್ಸಿನ ನಿರ್ಣಯಗಳ ಮೇರೆಗೆ ಅವರು ತಮ್ಮ ವಕೀಲಿಯನ್ನು ೧೯೨೦ರಲ್ಲಿ ಬಿಟ್ಟರು.

ಸನ್ ೧೯೧೬ರ ಫೆಬ್ರುವರಿಯಲ್ಲಿ ದಿಲ್ಲೀನಗರದಲ್ಲಿ ಪಂಡಿತ ಜವಾಹರಲಾಲರ ವಿವಾಹವು ಪಂಡಿತ ಜವಾಹರಲಾಲ ಕೌಲರ ಮಗಳಾದ ಶ್ರೀಮತೀ ಕಮಲಾದೇವಿಯೊಡನೆ ಅತಿ ವಿಜೃಂಭಣೆಯಿಂದ ನಡೆದುಹೋಯಿತು. ವೈಭವಸಂಪನ್ನವಾದ ವಂಶಕ್ಕೆ ಒಬ್ಬನೇ ಒಬ್ಬ ಮಗ; ಲಕ್ಷ್ಮೀಸರಸ್ವತಿಯರ ಅನುಗ್ರಹಕ್ಕೆ ಪಾತ್ರರಾಗಿ ಮೆರೆಯುತ್ತಿದ್ದವರು; ದೊಡ್ಡದೊಂದು ಸಂಸ್ಥಾನಕ್ಕೆ ಸರಿ

ಯಾದ ಸಂಪತ್ತು. ಹೀಗೆಸ್ಥಿತಿಯಿದ್ದದ್ದರಿಂದ ಈ ವಿವಾಹಸಮಾರಂಭವು ಅಪೂರ್ವ ವಾಗಿಯೂ ಸ್ಮರಣೀಯವಾಗಿಯೂ ಸೌಂದರ್ಯಸಂಭ್ರಮಗಳಿಂದಲೂ ಸಾಂಗ ವಾಯಿತು. ಇದರಲ್ಲೇನಾಶ್ಚರ್ಯ ? ಯುರೋಪಿಯನ್, ಆಂಗ್ಲೋ ಇಂಡಿ ಯನ್, ರಾಜರಾಜಾಂಗದವರೂ ಸರದಾರರೂ ದೊಡ್ಡ ದೊಡ್ಡ ಅಧಿಕಾರಿಗಳೂ ಈ ಪ್ರಸಂಗದಲ್ಲಿ ಬಂದಿದ್ದರು. ಈ ಮದುವೆಯು ಮಹೋತ್ಸವವು ಎಷ್ಟೋ ದಿವಸ ನಡೆದಿತ್ತು. ಏನು ಆ ಮೆರವಣಿಗೆ ? ಎಂತಹದಾ ವೈಭವ ? ಬಣ್ಣಿಸಳ ವಲ್ಲ. ದಿಲ್ಲಿಯಲ್ಲಿ "ನೆಹರು ವೆಡಿಂಗ್ ಕ್ಯಾಂಪ್"ದ ಸುಂದರ, ಸುಖದಾಯಕ ಸ್ಮರಣೆಯು ಈಗಲೂ ಅನೇಕರಿಗಿರಬಹುದು. ದಿಲ್ಲಿಯಿಂದ ಮುಂದೆ ಅಲಾಹಾ ಬಾದಿಗೆ ಹೋದ ನಂತರವೂ ಈ ಸಮಾರಂಭವು ನಡೆದೇ ಇತ್ತು. ಉಡಿಗೆ ತೊಡಿಗೆಗಳ ಬಹುಮಾನ, ಬಂಗಾರ ಸಿಂಗಾರಗಳ ಸಂಭಾವನೆ, ದಾನಮಾನಗಳ ಸೂರೆ ಇವುಗಳಿಗೆ ಲೆಕ್ಕ ಮಿತಿಯಿಲ್ಲ. ಊಟ ಉಪಚಾರಗಳ ಗಲಾಟೆಗೆ ಅಳತೆ ಯಿಲ್ಲ. ಅನೇಕ ಬಡಬಗ್ಗರಿಗೆ ಹಲವು ದಿನದ ಸೊಗಸಾಯಿತೆಂದು ಕಂಡುಂಡ ವರು ಹೇಳುವರು. ಇರಲಿ. ಮುಂದೆ ಮದುವೆಯಾದ ಮರುವರ್ಷವೇ ಅಂದರೆ ೧೯೧೭ರಲ್ಲಿ ಪಂ. ಜವಾಹರಲಾಲರಿಗೆ ಒಂದು ಕನ್ಯಾರತ್ನವು ಹುಟ್ಟಿತು. ಅದಕ್ಕೆ ಇಂದಿರೆಯೆಂದು ನಾಮಕರಣವನ್ನು ಮಾಡಿದರು. ನಂತರ ೧೯೨೪ರಲ್ಲಿ ಅವರಿ ಗೊಂದು ಗಂಡುಮಗುವೂ ಆಯಿತು. ಆದರೆ ಕೇವಲ ಮೂರೇ ದಿನಗಳಲ್ಲಿ ಅದು ಪರಲೋಕಪ್ರವಾಸವನ್ನು ಮಾಡಿತು.

ಪ್ರಯಾಗದಲ್ಲಿ ವಕೀಲಿಯನ್ನು ಮಾಡುತ್ತಿರುವಾಗ ೧೯೧೬ರಲ್ಲಿ ಭಾರತದಲ್ಲಿ ಲೋಕಮಾನ್ಯರೂ ಡಾ. ಆನಿಬೆಜಂಟರೂ ಸ್ವರಾಜ್ಯಸಂಘದ ಚಳವಳವನ್ನು ನಡೆಸಿ ದರು. ಸ್ವರಾಜ್ಯದ ರಣಭೇರಿಯು ನಿನಾದವು ನಾಡ ತುಂಬಿತು. ಪ್ರಯಾಗದಲ್ಲಿ ಪ್ರಸ್ಥಾಪಿಸಿದ ಆನಿಬೆಜಂಟರ ಸಂಘದ ಮಂತ್ರಿಪದವು ಜವಾಹರಲಾಲರ ಕೈಯ ಲ್ಲಿದ್ದು ಅದನ್ನವರು ಓರಣೆಯಿಂದಲೂ ಸ್ಥೈರಣೆಯಿಂದಲೂ ಕುಶಲತೆಯಿಂದಲೂ ಮಾಡಿ ತೋರಿಸಿದರು. ನಮ್ಮ ತರುಣ ನಾಯಕರ ಕಾರ್ಯಕ್ಷಮತೆಯನ್ನೂ ದಕ್ಷತೆ ಯನ್ನೂ ನೋಡಿ ಆನಿಬೆಜಂಟಮ್ಮನು ಆನಂದದಿಂದ ಉಬ್ಬಿದಳು. ಪ್ರಸಂಗ ಬಂದಾಗೆಲ್ಲ ಅವರನ್ನು ಹೊಗಳಿ ಅವರ ಕೀರ್ತಿಯನ್ನು ತೀಡಲಿಕ್ಕೆ ಉಪದೇಶಿಸುವಳು. ನಾಮದಾರ ಗೋಪಾಲಕೃಷ್ಣ ಗೋಖಲೆಯವರು ದಕ್ಷಿಣಆಫ್ರಿಕದ ಹಿಂದೀ ಬಾಂಧ ವರ ಸಹಾಯದ ಸಲುವಾಗಿ ಬೇಡಿಕೆಯನ್ನು ನಡೆಸಿದ ಕೂಡಲೆ ಜವಾಹರಲಾಲ

ರೊಬ್ಬರೇ ಮನೆಮನೆ ತಿರುಗಿ ನಾಲ್ವತ್ತು ಸಾವಿರ ರೂಪಾಯಿಗಳನ್ನು ಸಂಗ್ರಹಿಸಿ ಕಳುಹಿದರು. ಇದೇ ರೀತಿಯಿಂದ ತನಗೆ ತಿಳುವಳಿಕೆ ಬಂದಬಳಿಕ ಪ್ರತಿಯೊಂದು ಬಗೆಯಿಂದಲೂ ದೇಶಾಭ್ಯುದಯವಾಗುವಂತೆ ಅವರು ಕೆಲಸ ಮಾಡಿರುವರು; ಸಾರ್ವಜನಿಕ ಸಾಮಾಜಿಕ ಕಾರ್ಯಗಳಲ್ಲಿ ಕೈಹಾಕಿರುವರು.

೧೯೧೬ರಲ್ಲಿ ಮದುವೆಯಾದ ನಂತರ ಅವರೊಮ್ಮೆ 'ಲಾಡಕ್ಕಿ'ಗೆ ಹೋದರು. ಅಲ್ಲಿ ಹಿಮದ ಬೆಟ್ಟವನ್ನು ದಾಟುವಾಗ ಒಂದು ಖಣಿಯಲ್ಲಿ ಕಾಲು ಸಿಕ್ಕು ಜಾರಿ ಬಿದ್ದರು. ಆದರೆ ಹಗ್ಗಗಳ ಸಹಾಯದಿಂದ ಕೂಡಲೆ ಅವರನ್ನು ಮೇಲಕ್ಕೆತ್ತಿದರು. ಸ್ವಲ್ಪ ಹೆಚ್ಚುಕಡಿಮೆಯಾಗಿದ್ದರೆ ಅವರ ಎಲುಬಿನ ಪುಡಿ ಕೂಡ ಸಿಕ್ಕುತ್ತಿರಲಿಲ್ಲ. ಅಪಘಾತವು ಸಾಧಾರಣ ೧೮೦೦ ಅಡಿಯ ಮೇಲಿಂದ ಕೆಳಗೆ ಬೀಳುವುದಿದ್ದಿತು. ಒಮ್ಮೆ ನಾರ್ವೆ ದೇಶದಲ್ಲಿಯೂ ಅವರು ಗಂಡಾಂತರಕ್ಕೊಳಗಾಗಿದ್ದರು. ಹಿಮದ ನದಿಯಲ್ಲಿ (Glacier) ಕಾಲು ಜಾರಿ ಸೆಳವಿಗೆ ಬಿದ್ದು ನಡೆಯುತ್ತಿದ್ದರು. ಅಷ್ಟರಲ್ಲಿ ಸಕಾಲದಲ್ಲಿ ಒಬ್ಬ ಯುರೋಪೀಯನ ಸಹಾಯದಿಂದ ಅವರು ಉಳಿದರು.

ಮದುವೆಯ ಮುಂಚೆಯೂ ಮತ್ತೆಯೂ ಅವರು ಕಾಲಕ್ಕೆ ಸರಿಯಾದ ವೇಷಭೂಷಗಳಿಂದಲೂ ಆಟನೋಟಗಳಿಂದಲೂ ಸುಖಜೀವಿಗಳಾಗಿದ್ದರು. ಕುದುರೆಯ ಏರಾಟ, ಈಜಾಟ, ಗುಡ್ಡುಗಾಡಿನ ತಿರುಗಾಟ, ಚಳಿಗಾಲದ ಆಟಬೇಟೆ ಇವುಗಳಲ್ಲಿ ಅವರಿಗೆ ಲವಲವಿಕೆ ಹೆಚ್ಚು. ಹೀಗಿರುತ್ತ ೧೯೨೦ರಲ್ಲಿ ಒಮ್ಮೆ ಎಲ್ಲವೂ ಬದಲಾಯಿತು. ನಾಡದೇವಿಯು ಅವರನ್ನು ಕೈಮಾಡಿ ಕರೆದಳು. ಇವರ ಅಂತಃಕರಣಕ್ಕೆ ಆ ಕೂಗು ಕೇಳಿಸಿತು. ಅದು ಓಗುಟ್ಟಿತು. ಕೂಡಲೆ ಪಂ. ಜವಾಹರಲಾಲರು ಸುಖಸಂಭ್ರಮಗಳನ್ನು ತೊರೆದು, ವಿಲಾಸಜೀವನವನ್ನು ಜರೆದು ಕಾಂಗ್ರೆಸಿನ ಅಡಿಯಾಳಾಗಿ ಬಂದರು.

## ರಾಜಕಾರಣ

ಸ್ವರಾಜ್ಯಸಂಘದ ಚಟುವಟಿಕೆಗಳನ್ನು ಚಿವುಟಿಬಿಡಬೇಕೆಂದು ಆಳರಸರು ತೀರ ಮೊದಲು ಲೋಕಮಾನ್ಯರ ಮೇಲೆ ರಾಜದ್ರೋಹದ ಖಟ್ಲೆಯನ್ನುಮಾಡಿದರು. ಆದರೆ ಅವರು ಅದರಲ್ಲಿ ಜಯಶೀಲರಾಗಿ ಪಾರಾದರು. ಆದ್ದರಿಂದ ಅವರು ಈ ಚಳವಳದ ಎರಡನೇ ಪುರಸ್ಕರ್ತರಾದ ಡಾ. ಎನಿಬೆಜಂಟಮ್ಮನವರನ್ನು ಗಂಟು ಬಿದ್ದರು. ಮತ್ತು ಅವರನ್ನು ಶ್ರೀ. ಅರುಂಡೇಲ, ವಾಡಿಯಾ ಇವರೊಡನೆ ತಡೆಸಿ ಹಿಡಿದಿಟ್ಟರು.

(Internment). ಇದರಿಂದ ದೇಶದಲ್ಲಿ ಚಳವಳವು ಎಲ್ಲೆಲ್ಲಿಯೂ ಬೆಳೆಯಿತು. ಪ್ರತಿಯೊಂದೂರಲ್ಲಿ ಸರಕಾರದ ಈ ಕೃತಿಯು ಕಡುತರವಾದ ತಿರಸ್ಕಾರವನ್ನೇ ಮಾಡಿದರು. ಈ ಸಮಯದಲ್ಲಿ ಸರಕಾರದ ತೀವ್ರ ನಿಷೇಧನನ್ನು ಸೂಚಿಸುವುದಕ್ಕಾಗಿ ಸಂಯುಕ್ತ ಪ್ರಾಂತದವರು ಪ್ರಾಂತಿಕ ಸಭೆಯನ್ನು ಕರೆದರು. ಪಂಡಿತ ಮೋತಿಲಾಲರು ಮುಂದಾಳಾಗಿರುವುದರಿಂದ ಅವರ ಅಧ್ಯಕ್ಷತೆಯಲ್ಲಿಯೇ ಸಭೆಯು ಸೇರಿತು. ಈ ಪ್ರಸಂಗದಲ್ಲಿ ಒಂದು ಅದ್ಭುತವಾದ ಸಂಗತಿಯು ಜರಗಿತು. ಅದರಿಂದ ಪಂಡಿತ ಜವಾಹರಲಾಲರು ಎಂತಹ ನಿಸ್ಸೀಮ ಸ್ವಾತಂತ್ರ್ಯವೃತ್ತಿಯವರಿರುವರೆಂಬುದು ಸ್ಪಷ್ಟವಾಗಿ ನಿದರ್ಶನಕ್ಕೆ ಬರುತ್ತದೆ. ಸಂಗತಿಯ ಸಾರಾಂಶವು ಹೀಗಿದೆ— ಸಭೆಗೆ ಜನಸಮ್ಮರ್ದವು ತುಂಬಾ ನೆರೆದಿತ್ತು. ಆಗ ಮೋತಿಲಾಲರು ಎದ್ದು ತಮ್ಮ ಭಾಷಣಕ್ಕೆ ಮೊದಲು ಮಾಡಿದರು. " ಸಭಿಕರೇ, ಈ ಬ್ರಿಟಿಷ ಕಾರಭಾರದ ಕೆಳಗೆ ಹಿಂದೀ ಜನರು ಯಾವ ಬಗೆಯ ಕೀಳು-ಕಾಡು ಸ್ಥಿತಿಗೆ ಬಂದಿದ್ದಾರೆ ಮತ್ತು ಅವರ ಮೇಲೆ ಯಾವ ತರಹದ ದಬ್ಬಾಳಿಕೆಯೂ ದರ್ಪವೂ ನಡೆಯುತ್ತದೆಂಬುದನ್ನು ನಾವೆಲ್ಲರೂ ಕಂಡುಂಡ ಮಾತಾಗಿದೆ. " ಎಂದು ಮುಂತಾಗಿ ಮಾತನಾಡಿ, ಮತ್ತೆ, ಮುಂಚಿನ ರಾಜಕಾರಣದ ವಿಚಾರಸರಣಿಗನುಸಾರ " ಆದರೆ ಒಂದು ವೇಳೆ ಇಂಥ ಅವನತಾವಸ್ಥೆಯು ನಮ್ಮದಿದ್ದರೂ ನಮಗೆ ಈ ಬಗ್ಗೆ ಬೇರೆ ಗತ್ಯಂತರವಿಲ್ಲ. ನಮ್ಮ ನಾಡಿನ ಇತಿಶ್ರೀಗಳು ಬ್ರಿಟಿಷರ ಕೈಯಲ್ಲಿವೆ. ಆದ್ದರಿಂದ ನಾವು ಅವರ ಮೇಲೆ ವಿಶ್ವಾಸವಿಡಲೇಬೇಕು." ಎಂದು ಹೇಳುತ್ತಿದ್ದರು. ಈ ಕೊನೆಯ ಶಬ್ದಗಳು ಅವರ ಬಾಯಿಯಿಂದ ಹೊರಬೀಳುತ್ತಿದ್ದವೋ ಇಲ್ಲವೋ ಅಷ್ಟರಲ್ಲಿಯೇ ' ಎಂಬುದೊಂದು ಪ್ರಶ್ನೆಯಿದೆ ' ಎಂಬ ಒಂದು ಧ್ವನಿಯು ಕೇಳಿಸಿತು. ಆ ಸ್ವರವು ಪಂಡಿತ ಜವಾಹರಲಾಲರದಿತ್ತು. ತಾವು ಮಾತನಾಡುತ್ತಿರುವಾಗ ಯಾರದೂ ಎದುರು ನುಡಿಯನ್ನು ಕೇಳಿ ಗೊತ್ತಿಲ್ಲದ ಮೋತಿಲಾಲರು ಕೂಡಲೆ ಕಣ್ಣು ಕೆರಳಿಸಿ ಕೈಯಲ್ಲಿದ್ದ ಕಾಗದವನ್ನು ಗಾಳಿಯಲ್ಲಿ ತೂರಿ, ಎದುರಿಗಿದ್ದ ಟೇಬಲನ್ನು ಅಪ್ಪಳಿಸಿ " ಹೀಗೆ ಪ್ರಶ್ನೆ ಮಾಡುವವರಾರು ? " ಎಂದು ಕೇಳುವಷ್ಟರಲ್ಲಿ ಪುನಃ ಮೊದಲಿನ ಧ್ವನಿಯೇ ಸಭೆಯಿಂದ ಕೇಳಬಂತು. ತಕ್ಷಣವೇ ಪಂಡಿತ ಮೋತಿಲಾಲರು ಕಿಡಿಕಿಡಿಯಾಗಿ ರೇಗಿಬಿದ್ದು ಕನ್ನಡಕಗಳನ್ನು ತೆಗೆದು "ನನ್ನ ವಿಚಾರಸರಣಿಯಲ್ಲಿ ದೋಷವನ್ನು ತೆಗೆಯುಕೊಡುವವನು ಮುಂದೆ ಬರಲಿ '' ಎಂದು ಆವ್ಹಾನವನ್ನು ಮಾಡಿದರು. ಆದರೆ ಔಚಿತ್ಯ ಭಂಗವಾಗಬಾರ

ದೆಂದು ಜವಾಹರಲಾಲರು ಅಷ್ಟಕ್ಕೇ ಸುಮ್ಮನಾದರು. ಅವರ ರಕ್ತದ ದರುವು ಮಾತ್ರ ಮಿಂಚದಿರಲಿಲ್ಲ.

ನಂತರ ಬಂತು ೧೯೧೯ನೇ ಇಸವಿ. ಆಳರಸರ ಕ್ರೂರ ಕರ್ಮಗಳ ಕಪ್ಪುಗಾಲ. ಅಲ್ಲಿಂದಲೇ ರಭಸದಿಂದ ಆರಂಭವಾಯಿತು ಅವರ ಕೆಡುಗಾಲಕ್ಕೆ. ಆ ಸಂವತ್ಸರದಲ್ಲಿ ನಡೆದ ಕೃಷ್ಣಕೃತ್ಯಗಳು ಭಾರತೇತಿಹಾಸದಲ್ಲಿ ನೆಲೆನಿಂತು ಬಿಡುತ್ತವೆ. ರೌಲೆಟ್ ಆಕ್ಟೆಂದು ಪ್ರಸಿದ್ಧವಿದ್ದ ಕಾಡು ಕಟ್ಟಳೆಯೂ ಅದೇ ವರ್ಷ ಪಾಸಾಯಿತು. ದಬ್ಬಾಳಿಕೆಯ ಭೂತವು ಬತ್ತಲೆ ಕುಣಿಯಹತ್ತಿತು. ಜವಾಹರಲಾಲರು ಅಯೋಧ್ಯಾ ಪ್ರಾಂತದ ಒಕ್ಕಲಿಗರಲ್ಲೆಲ್ಲ ಓಡಾಡಿ ಕೈಮೀರಿ ಕಷ್ಟಬಟ್ಟು ಅವರಲ್ಲಿ ಅದ್ಭುತವಾದ ಜಾಗೃತಿಯನ್ನುಂಟುಮಾಡಿದರು. ಇದೇ ಸಮಯಕ್ಕೆ ಮಹಾತ್ಮಾ ಗಾಂಧಿಯವರು ರೌಲೆಟ್ ಆಕ್ಟನ್ನು ಪಾಸು ಮಾಡಬಾರದಾಗಿ ಸರಕಾರದ ಕೂಡ ಕುಸ್ತೀ ಆಡಿದರು. ಸರಕಾರವು ಒಳಗೊಳಗೇ ಕೊಳೆತು ಹೋಗಿದ್ದು ನಾಡನ್ನು ಮಣ್ಣುಗೂಡಿಸುತ್ತಿದೆಯೆಂದು ಸ್ಪಷ್ಟವಾಗಿ ಹೇಳಿದರು. ಆದರೂ ಇಂಪೀರಿಯಲ್ ಕೌನ್ಸಿಲಿನವರು ಆ ಕೃಷ್ಣ ಕಾಯಿದೆಯನ್ನು ಹಿಂದೀ ಸಭಾಸದರ ವಿರೋಧದ ಒಮ್ಮತವನ್ನು ಸಹ ಲೆಕ್ಕಿಸದೆ ಅಂಗೀಕರಿಸಿದರು. ಸರಕಾರದ ನಂಬಿಗೆಯ ಸಹಕಾರಿಗಳಾದ ಗಾಂಧಿಯವರು ಸ್ವದೇಶೀ ಮತ್ತು ಉಪವಾಸಗಳಿಂದ ಕೂಡಿದ ಸತ್ಯಾಗ್ರಹ ವ್ರತವನ್ನು ಕೈಕೊಂಡರು. ನಾಡಿಗೆ ಹಾಗೆಯೇ ನಡೆಸಬೇಕೆಂದು ಕೇಳಿಕೊಂಡರು. ಈ ಸಂದರ್ಭದಲ್ಲಿ ಮತ್ತೊಮ್ಮೆ ತಂದೆ ಮಕ್ಕಳಲ್ಲಿ ನಿಜವಾದ ಅಭಿಪ್ರಾಯಭೇದವುಂಟಾಯಿತು. ಮೋತಿಲಾಲರು ಮಹಾತ್ಮರ ಈ ಸತ್ಯಾಗ್ರಹ ವ್ರತದಲ್ಲಿಯ ಎರಡು ಅಂಶಗಳಲ್ಲಿ ಮೊದಲನೆಯದಾದ ಸ್ವದೇಶಿಗೆ ಸಹಿ ಮಾಡಬಹುದೆಂದೂ ಎರಡನೆಯ ಭಾಗಕ್ಕೆ ಸಂಬಂಧವನ್ನಿಡದಿರುವದೇ ಜಾಣತನದ ಕುರುಹೆಂದೂ ಸಭೆಯಲ್ಲಿ ಸಾರಿದರು. ತಕ್ಷಣವೇ ತೀವ್ರ ಮತಭೇದವುಳ್ಳ ಜವಾಹರಲಾಲರು ಗಂಭೀರವಾಗಿ 'ಧಿಕ್ಕಾರ' ( Shame ) ಎಂದು ಗುಡುಗು ಹಾಕಿದರು. ತಂದೆಯ ತಲೆಯಲ್ಲಿಯ ಹುಳಗಳು ಕೆದರಿದವು. ಮನಸ್ಸಿನಲ್ಲಿ ಅಳುಕಿದಂತಾಗಿ ಅನೇಕ ಅಲೆಗಳೆದ್ದವು. ಆದರೆ ಅವರು ಹಟಮಾರಿಗಳಲ್ಲ. ಅದಲ್ಲದೆ ವಿಚಾರ ಸ್ವಾತಂತ್ರ್ಯವನ್ನು ಪುರಸ್ಕರಿಸುವವರು. ಆದ್ದರಿಂದ ಮರುಮಾತೆತ್ತಲಿಲ್ಲ.

ಇತ್ತ ಜವಾಹರಲಾಲರು ತಮ್ಮ ಅಯೋಧ್ಯಾ ಪ್ರಾಂತದೊಳಗಿನ ರೈತರ ಚಳವಳವನ್ನು ರಭಸದಿಂದ ಸಾಗಿಸಹತ್ತಿದರು. 'ಟೆನೆನ್ಸಿ ಲಾ' ಎಂಬ ಕಂದಾಯದ ಕಾನೂನನ್ನು ತಿರಸ್ಕರಿಸಿ ಅದನ್ನು ಕಿತ್ತೊಗೆಯಬೇಕೆಂಬ ಬಗ್ಗೆ ಈ ಉದ್ಯಮವು ನಡೆದಿತ್ತು. ಒಕ್ಕಲಿಗರ ಒಪ್ಪಿಗೆಯಿಲ್ಲದೆ ಈ ಕಾನೂನನ್ನು ಪ್ರಭುತ್ವದವರು ಪಾಸು ಮಾಡಿ ಪ್ರಚಾರದಲ್ಲಿ ತಂದಿದ್ದರು. ಏರಿಕೆಯ ಬಿಸಿ ರಕ್ತದವರಾದ ಜವಾಹರಲಾಲರು ತಲೆ ತುರಿಸುತ್ತ ಸುಮ್ಮನಿರಲಿಲ್ಲ. ಕೈಯೂರಿ ಕೂಡಲಿಲ್ಲ. ಬಡ ಒಕ್ಕಲಿಗರ ಗುಡಿಸಲಿನಿಂದ ಗುಡಿಸಲಿಗೆ ಹೋಗಿ ನಾಡಿನಲ್ಲಿ ಆದ, ಆಗುವ ಸಂಗತಿಗಳನ್ನು ಸರಿಯಾಗಿ ತಿಳಿಯುವಂತೆ ತಿಳಿಸಿದರು. ಮಬ್ಬಿನ ಮುಸುಕನ್ನು ಹಾರಿ ಹೊಡೆದು ತೆರೆಯನ್ನು ತೆರೆದು ದಿಟ್ಟಿಸಿ ನೋಡಲು ಕಲಿಸಿದರು. ಮತ್ತು ಅವರಲ್ಲಿ ಒಕ್ಕಟ್ಟನ್ನೂ ಓರಣೆ( ಶಿಸ್ತು) ಯನ್ನೂ ಬೆಳೆಸಿದರು. ಹಳ್ಳಿಸಳ್ಳಿಗಳಲ್ಲಿ ಗ್ರಾಮ ಕೂಟಗಳನ್ನುಂಟುಮಾಡಿ ನ್ಯಾಯನಿಗದಿಗಳನ್ನು ಬಗೆಹರಿಸುವ ಹಂಚಿಕೆಯನ್ನು ತೋರಿಸಿದರು. ಅಂತೂ ಅಯೋಧ್ಯಾ ಪ್ರಾಂತದೊಳಗಿನ ಅಜ್ಞ ಒಕ್ಕಲಿಗರಲ್ಲಿ ಬೆಳಕನ್ನು ಬೀರಿ ಒಕ್ಕಟ್ಟನ್ನು ಊರಿ ಆತ್ಮ ಶಕ್ತಿಯ ಪ್ರಚಂಡ ಪ್ರಭಾವವನ್ನು ತೋರಿಸಿದರು. ಸರಕಾರದವರ ಎದೆಯು ಜುಮ್ಮೆಂದಿತು. ಬುದ್ಧಿಯು ಭ್ರಮೆಯಾತು. ಅವರು ಗಾಬರಿಗೊಂಡು ೧೪೪ ನೇ ಕಲಮಿನಿಂದ ಅಲ್ಲಲ್ಲಿ ಎಲ್ಲರ ಸೊಲ್ಲನ್ನಡಗಿಸಲು ನೋಡಿದರು. ಐವರು ಒಂದೆಡೆಯಲ್ಲಿ ಸೇರಿ ನಿಲ್ಲಲು ಬಿಡಲಾರೆವೆಂದರು. ಇದಕ್ಕೂ ಅಂಜದೆ ಅಳುಕದೆ ಮುಂವರಿದದ್ದರಿಂದ ಸರಕಾರವು ಸೋಲಲೇ ಬೇಕಾಯಿತು. ಅದೋ, ಅಷ್ಟು ಆತ್ಮವಿಶ್ವಾಸವು ರೈತರಲ್ಲಿ ಉಂಟಾಗಿತ್ತು !! ಇದಕ್ಕೂ ಹೆಚ್ಚೇನು ಹೇಳಲಾದೀತು ?

ಇದೇ ಕಾಲಕ್ಕೆ ಪಂಜಾಬದ ವೀರ ಪ್ರದೇಶದಲ್ಲಿ ಮಾರ್ಶಲ್ ಲಾ ( ಸಂಗ್ರಾಮ ಕಾಯಿದೆ ) ಪ್ರಾರಂಭವಾಯಿತು. ಡಾಯರನು ತಾಳ ತಪ್ಪಿದನು. ಜಲಿಯನ್‌ವಾಲಾದಲ್ಲಿ ಸೇರಿದ ಸಭಿಕರನ್ನು ಮಕ್ಕಳು ಮುದುಕರೆನ್ನದೆ ಗುಂಡಿನಿಂದ ಚಂಡಾಡಿದನು. ಚದರಿಸಿ ಬೆದರಿಸಿ ಬೆಂಬತ್ತಿ ಮಟ್ಟಿದನು. ಅಮೃತಸರದ ಬೀದಿಯಲ್ಲಿ ಡಾಯರನ ಉರವಣೆಯ ಉಪಟಳಕ್ಕೆ ಅಳುಕಿ ಜನರು ಅವನ ಅಮಾನುಷ ಅಪ್ಪಣೆಯಂತೆ ಮಾರ್ಗದಲ್ಲಿ ಮೂಗು ತಿಕ್ಕಿದರು. ಒಂಟಿಗಾಲಿನಿಂದ ಬಾಗಿ ನಡೆದರು! ನಡೆವ ಕಾಲಿದ್ದರೂ ಅಂಬೆಗಾಲಿನಿಂದ ನಡೆದರು !! ಬಟ್ಟೆಗಳನ್ನು

ಕಳಚಿ ಬತ್ತಲೆಯಾದರು !! ಉತ್ತರನಾಡಿನಲ್ಲಿ ನಡೆದ ಅಂದಿನ ಆ ಪಾಶವೀ ಪಡಿಪಾಟಲನ್ನು ಬರೆಯಲು ನಾಲಗೆ ಸಾಲದು. ಹೆಂಗಳೆಯರನ್ನು ಅಂಗಳದಲ್ಲಿ ಳೆದು ಹಂಗಿಸಿದರು, ಬಂಗಿಸಿದರು !! ಈ ಸುದ್ದಿಯನ್ನು ಕೇಳಿ ನಾಡೆಲ್ಲ ನೊಂದಿತು ! ಪ್ರತಿಯೊಂದು ರಾಷ್ಟ್ರಕ್ಕೂ ಅಪಮಾನಗಳನ್ನು ಸಹಿಸುವ ಒಂದು ಸ್ಥೈರಣೆಯುಂಟು. ಅದಕ್ಕೊಂದು ಮೇರೆಯುಂಟು ಮಿತಿಯುಂಟು. ಭಾರತ ರಾಷ್ಟ್ರಕ್ಕಾದ ಅಪಮಾನವು ಮೇರೆ ಮೀರಿತು, ಅಳತೆಗೆಟ್ಟಿತು. ನಮ್ಮ ಮುರವತ್ತು ಮೋರೆ ತೋರಿಸದಾಯ್ತು. ಮನವು ಬೆಂದಿತು. ನಾಡಿನ ಅಭಿಮಾನ ಜ್ಯೋತಿಯು ಜಾಗ್ರತವಾಯಿತು. ಹುರುಪಳಿಸಿದ ಹೃದಯವು ಬೇಗುದಿಗೊಂಡು ಈ ಮಾನಭಂಗದ ಮುಯ್ಯವನ್ನು ತೀರಿಸಬೇಕೆಂದಿತು. ಈ ಗರ್ವಭಂಗದ ಸುದ್ದಿಯನ್ನು ಕೇಳಿದ ಹಿಂದೀಯನು ಕ್ಷಣ ಹೊತ್ತಾದರೂ ಕಣ್ಣು ಕೆರಳಿಸಿ, ಮೈಯನ್ನುಬ್ಬಿಸಿ, ತುಟಿಗಳನ್ನು ಕಚ್ಚಿ, ಕೈಗಳನ್ನು ಮುಷ್ಟಿಗೈದು ಅಹಾ ! ಡಾಯರನೇ ! ಎಂದು ಒಳಗಿಂದೊಳಗೇ ಉರಿಯುವ ಡಂಕನ್ನು ತಡೆಯಲಾರದೆ ಮುನಿದ ಹಾವಿನಂತೆ ಭುಸ್ಸೆಂದು ಉಸುರ್ಗರೆಯದೆ ಇರಲಿಕ್ಕಿಲ್ಲ. ರೋಷ ದ್ವೇಷಗಳನ್ನು ತೋರಿಸದಿರಲಿಕ್ಕಿಲ್ಲ. ಆದರೇನು ಮಾಡುವುದು ಸಮರ ಧೀರರಾಗಿ ಕೈಗೆ ಕೈಮಾಡಿ ಖಡ್ಗವನ್ನು ಝಳಪಿಸಿ ಎರಿಬಂದವರನ್ನು ತರಿದು, ಸೊಕ್ಕನ್ನು ಕಕ್ಕಿಸಿ, 'ಬೇಡಪ್ಪಾ ಇನ್ನು ಬೇಡ ಈ ಕಡುಗಲಿಗಳನ್ನು ಕೆರಳಿಸುವ ಬೇಟೆ' ಎಂದು ವೈರಿಗಳಿಂದ ಕೂಗಿಸುವ ಆ ಶರೀರಶಕ್ತಿಯು, ಈ ಸರಕಾರದ ಆಳಿಕೆಯಲ್ಲಿ ಎಂದೋ ಮುಗ್ಗಿ ಹೋದಂತಾಗಿದೆ. ನಾಡೆಲ್ಲ ಮುನಿದು ಮಂತ್ರಬದ್ಧವಾದ ಸರ್ಪದಂತಾಗಿದೆ. ಸಾತ್ವಿಕ ಕ್ರೋಧದಿಂದ ಬಸವಳಿದು ಬುಸುಗುಡುತ್ತಿದೆ. ಮುಂದೇನು ಮಾಡಬೇಕೆಂಬ ಮಾರ್ಗತೋರದೆ ಸುತ್ತುಮುತ್ತಲು ಕತ್ತಲೆ ಕವಿದಂತಾಗಿದೆ. ಈ ನಿರ್ವಿಣ್ಣಾವಸ್ಥೆಯಲ್ಲಿ ನಾಡಿನ ತಪಶ್ಶಕ್ತಿಯು ಒಬ್ಬುಳಿಗೂಡಿ ತಪೋಧನರಾದ ಮಹಾತ್ಮರಲ್ಲಿ ಪ್ರಕಟವಾಯಿತು. ಅವರು—

**" ಕಿನ್ನಾಮ ರೋದಿಷಿ ಸಖೇ ತ್ವಯಿ ಸರ್ವಶಕ್ತಿಃ**
**ಆತ್ಮೈವ ಹಿ ಪ್ರಭವತೇ ನ ಜಡಃ ಕದಾಚಿತ್ । "**

ಎಂದು ಸಾರಿದರು. ಪಾರ್ಥಿವಶಕ್ತಿಯು ಪರಾಭವವಾದರೂ ಚಿಂತೆಯಿಲ್ಲ ಆತ್ಮಶಕ್ತಿಯ ಆವಿರ್ಭಾವನ್ನು ತೋರಿರೆಂದು ಉದ್ಘೋಷಿಸಿದರು. ಹಿಂದೀ

ಜನಾಂಗಕ್ಕೆ ತಮ್ಮ ಹೆಗ್ಗುರಿಯಾವುದೆಂಬುವನ್ನು ಬೋಧಿಸಿದರು. ಪಶುಶಕ್ತಿಯನ್ನು ಈಶಶಕ್ತಿಯಿಂದ ಗೆಲ್ಲುವ ದಾರಿದೋರಿದರು. ನಾಡಿನಲ್ಲಿ ಆತ್ಮಶಕ್ತಿಯ ಶೌರ್ಯದ ಸಂಚಾರವಾಯಿತು. ಕೋಪಾಟೋಪದಿಂದ ಕುದಿಯುತ್ತಿದ್ದ ಕೆಲಬರ ಕ್ರೋಧಕ್ಕೆ ಮಹಾತ್ಮರ ಈ ಸತ್ಯಾಗ್ರಹ ಚಳವಳದಲ್ಲಿ ಕೊರತೆಯು ಕಾಣಿಸಿತು. ಆದರೆ ರೋಷಾತಿರೇಕದಿಂದ ಅತ್ಯಾಚಾರವನ್ನೇ ಆರಾಧಿಸುತ್ತಿದ್ದವರಿಗೆ ಇದರಿಂದ ಸಮಾಧಾನವಾಗಲಿಲ್ಲ. ಲೋಕಕ್ಷೋಭದ ಸಂತಾಪವನ್ನು ರಾಷ್ಟ್ರನಿರ್ಮಾಣದ ಕಾರ್ಯರಂಗಕ್ಕಿಳಿಸಿ ಪ್ರಭುತ್ವವನ್ನು ಪಲ್ಲಟಿಸುವುದೇ ಧ್ಯೇಯವಾಗಿರಿಸಿ ಮಹಾತ್ಮಾಗಾಂಧಿಯವರು ತಮ್ಮ ಸತ್ಯಾಗ್ರಹದ ಸಂಕಲ್ಪವನ್ನು ನಾಡಿನೆದುರಿಗಿಟ್ಟರು. ಇತ್ತ ಸರ್ಕಾರದವರು ಪ್ರಜೆಗಳನ್ನು ತಮ್ಮಣಿಗೊಳಿಸುವುದಕ್ಕೆ ಪಂಜಾಬದ ಅತ್ಯಾಚಾರವಿಚಾರಕ್ಕೊಂದು ಮಂಡಲವನ್ನು ನೇಮಿಸಿದರು. ಕೊಂಗ್ರೆಸಿನವರೂ ಗಾಂಧಿ, ಮೋತಿಲಾಲ, ಮಾಲವೀಯ, ದಾಸ, ಜಯಕರ ಮುಂತಾದವರದೊಂದು ಮಂಡಲವನ್ನು ನೇಮಿಸಿದರು. ಈ ಚೌಕಶಿಯ (ತನ್ಖೆಯ) ಮಂಡಲದೊಡನೆ ಪಂಡಿತ ಜವಾಹರಲಾಲರೂ ಸಹಕರಿಸಿ ಅವರ ಕಾರ್ಯದಲ್ಲಿ ನೆರವಾಗಲು ಹೋದದ್ದರಿಂದ ಅವರು ಪ್ರತ್ಯಕ್ಷವಾಗಿ ಪಟ್ಟ ಅನುಭವವನ್ನು ಬಣ್ಣಿಸಲಳವಲ್ಲ. ಇದರಿಂದ ಸರಕಾರದ ಬಗ್ಗೆ ಅವರ ಮನವು ಸಂಪೂರ್ಣವಾಗಿ ಸಂತಪ್ತವಾಯಿತು. ಇನ್ನು ಮುಂದೆ ಅವರು ಸರಕಾರದವರ ಸಹಕಾರಮಾಡಬೇಕೆಂದು ಹೇಳಿದ ಕೂಡಲೆ ಕೆಂಡದಂತಾಗಿ ಉರಿಯನ್ನು ಕಾರುವರು! ಪಾರತಂತ್ರ್ಯದ ಪೀಡೆಗಳ ಪರಮಾವಧಿಯಾಯಿತೆನ್ನುವರು!

ಇದೇ ಹೊತ್ತಿಗೆ ಅಳರಸರು ತಮ್ಮ ೧೯೧೯ನೆಯ ಸುಧಾರಣೆ (Reforms) ಗಳನ್ನು ಪ್ರಕಟಮಾಡಿದರು. ಈ ಸುಧಾರಣೆಗಳು ಅಪೂರ್ಣ, ನಿರಾಶಾಜನಕ ಮತ್ತು ಅಸಮಾಧಾನಕಾರಕವಾಗಿವೆಯೆಂದು ಮೋತಿಲಾಲರ ಅಧ್ಯಕ್ಷತೆಯಲ್ಲಿ ನೆರೆದ ಅಮೃತಸರ ಕಾಂಗ್ರೆಸ್ಸಿನಲ್ಲಿ ನಿರ್ಣಯವಾಯಿತು. ಆದರೂ ದರಕಾರವಿಲ್ಲದೆ ಸರಕಾರದ ಅತ್ಯಾಚಾರ, ಅವುಗಳ ಕಲಂಕವನ್ನು ತೊಳೆದು ತೆಗೆಯಲು ಹಂಟರ ಕಮಿಟಿಯವರು ಮಾಡಿದ ಸುಣ್ಣದ ಸಾರಣೆ, ಪಾರ್ಲಿಮೆಂಟಿನಲ್ಲಿಹಿಂದೀ ಲೋಕಮತದ ತಿರಸ್ಕಾರ ಇವುಗಳು ಒಂದರಹಿಂದೊಂದು ನಡೆದುವು. ಆದ್ದರಿಂದ ಸುಧಾರಣೆಗಳ ಬಗ್ಗೆ ನಾಡಿನ ನಿರ್ಣಯದ ಪುನರ್ವಿಚಾರವಾಗಬೇಕೆಂದು ಕಲ್ಕತ್ತೆಯಲ್ಲಿ ಅದೇ ವರ್ಷ ಕೊಂಗ್ರೆಸಿನ ವಿಶೇಷ ಅಧಿವೇಶನವನ್ನು ಕರೆದರು.

ಅಲ್ಲಿ ನಾಡಿನ ಮುಂದಾಳುಗಳ ಬಣಬಣಗಳಲ್ಲಿ ರಸಕಸಿಯಾಗಿ ಕೊನೆಗೆ ಅವರೆಲ್ಲರೂ ಬಹುಮತದಿಂದ ಮಹಾತ್ಮರ ಮಾತನ್ನು ಮನ್ನಿಸಿದರು. ಕೊಂಗ್ರೆಸ್ಸಿನಲ್ಲಿ ವೀರಾಗ್ರೇಸರರಾದ ಪಂಜಾಬದ ಕೇಸರಿ ಲಾಲಾ ಲಜಪತರಾಯರ ಅಧ್ಯಕ್ಷತೆಯ ಕೆಳಗೆ ಅಸಹಕಾರದ ಸುಪ್ರಸಿದ್ಧ ಕಾರ್ಯಕ್ರಮವನ್ನು ಅಂಗೀಕರಿಸಲಾಯಿತು. ಈ ನಿರ್ಣಯಕ್ಕೆ ಧಾರ್ಮಿಕ ದುರಿತಗಳನ್ನು (Grievance) ಅನುಭವಿಸಿ ಮರುಗುತ್ತಿದ್ದ ಮುಸಲ್ಮಾನರ ಸಂಪೂರ್ಣ ಬೆಂಬಲವಿದ್ದಿತು. ಅವರು ಖಿಲಾಫತ ಚಳವಳವನ್ನು ಅಷ್ಟು ಪ್ರಖರವಾಗಿ ನಡೆಸುತ್ತಿದ್ದರು. ಸರ್ವವಿಧದಿಂದಲೂ ದೇಶದಲ್ಲಿ ಒಕ್ಕಟ್ಟಿನ ಹುರಿಯುಂಟಾಯಿತು. ಈ ಮಹತ್ವದ ಪ್ರಸಂಗದಲ್ಲಿ ನಾಡಿನ ಕಟ್ಟಪ್ಪಣೆಯನ್ನು ಶಿರಸಾವಹಿಸಿ ಜವಾಹರಲಾಲರು ಅಸಹಕಾರದ ರಣರಂಗಕ್ಕಿಳಿದು ವಕೀಲಿಯನ್ನು ತೊರೆದರು. ಅಂದಿನಿಂದ ಇಂದಿನವರೆಗೂ ಅವರು ಧೈರ್ಯಸ್ಥೈರ್ಯಗಳಿಂದ ಕಾದುತ್ತಿರುವರು.

ಈ ನಡುವೆ ಮತ್ತೊಮ್ಮೆ ಅವರ ಸತ್ತ್ವಪರೀಕ್ಷೆಯಾಯಿತು. ಸನ್ ೧೯೨೦ ರಲ್ಲಿ ಅಫಗಾನ ಸರಕಾರದವರ ವಕೀಲರು ಒಡಂಬಡಿಕೆಯ ಪ್ರಸ್ತಾಪವೆತ್ತಲು ಮುಸೂರಿಗೆ ಬರುವವರಿದ್ದರು. ಪಂಡಿತ ಜವಾಹರಲಾಲರು ಆಗ ಮುಸೂರಿಯಲ್ಲಿಯೇ ಇದ್ದರು. ಅವರು ಅಫಗಾನ ವಕೀಲರಿಗೆ ಭೆಟ್ಟಿಯಾಗದಂತೆ ಸರಕಾರದವರು ಎಚ್ಚರದಿಂದಿದ್ದರು. ಜವಾಹರಲಾಲರಿಂದ ಆ ಪ್ರಕಾರದ ವಚನವನ್ನು ಕೇಳಿದರು. ವಸ್ತುತಃ ಜವಾಹರಲಾಲರು ಅವರನ್ನು ಕಾಣುವವರೇ ಇರಲಿಲ್ಲವೆನ್ನಬಹುದು. ಆದರೆ ಸರಕಾರದವರು ಇಲ್ಲದ ಸಲ್ಲದ ಕರಾರುಗಳನ್ನು ಹಾಕಿದ್ದರಿಂದ ಅವರು ಅದಕ್ಕೊಪ್ಪಲೇ ಇಲ್ಲ. ಆದ್ದರಿಂದ ಜವಾಹರಲಾಲರನ್ನು ಮುಸೂರಿಯಿಂದ ಹೊರದೂಡಿದರು. ಆದರೆ ಕೆಲವು ಕಾಲದ ನಂತರ ಈ ಶಿಕ್ಷೆಯನ್ನು ಹಿಂದೆಗೆದರು. ತತ್ತ್ವಪ್ರೇಮಿಗಳ ಮೇಲೆ ಬೆದರುಗುಂಡಿನ ಪರಿಣಾಮವಾಗದು. ಜವಾಹರಲಾಲರು ಶ್ರೀಮಂತಿಗೆಯ ಸುಪ್ಪತ್ತಿಗೆಯಲ್ಲಿ ಬೆಳೆದವರಹುದು. ಆದರೆ ತತ್ತ್ವಗಳು ಅವರ ರಕ್ತದಲ್ಲಿಳಿದು ಸತ್ತ್ವವಾಗಿ ಹೋಗಿವೆ. ಆದ್ದರಿಂದ ಅವರು ರಾಷ್ಟ್ರೀಯತ್ವದ ಘನೀಭೂತ ಮೂರ್ತಿಯೇ ಆಗಿರುವರು. ಅಸಹಕಾರ ವ್ರತವನ್ನು ಅಂಗೀಕರಿಸಿದ ಬಳಿಕ ಅವರು ಪ್ರಯೋಜನವಿಲ್ಲದೆ ಕ್ಷಣಹೊತ್ತನ್ನೂ ಕಳೆದಿಲ್ಲ. ನಾಡಿನ ಬುನಾದಿಯಾದ ಒಕ್ಕಲಿಗರನ್ನು ಎಚ್ಚರಿಸುವುದರಲ್ಲಿಯೇ ಅವರು ಅತ್ಯಂತ ಶ್ರಮಪಟ್ಟಿರುವರು. ಗ್ರಾಮಗಳ ಪುನರ್ಘಟನೆಯನ್ನು ಮಾಡಿ ರಾಷ್ಟ್ರ

ನಿರ್ಮಾಣದ ತಳಹದಿಯನ್ನು ಹಾಕುವುದರಲ್ಲಿ ಅವರಿಗೆ ಉತ್ಸಾಹ ಹೆಚ್ಚು. ಬರ ಬರುತ್ತ ಅವರು ಒಕ್ಕಲಿಗರ ಒಲವಿನ ಮೂರ್ತಿಯಾದರು. ಅವರ ಕಣ್ಣಿಗೆ ಹಬ್ಬ ವಾದರು. ಜನರಲ್ಲಿ ಅವರ ಬಗ್ಗೆ ದೇವಭಾವವು ಉಂಟಾಗಹತ್ತಿತು ! ಅರಸೊತ್ತಿಗೆ ಯಿಂದ ಮೆರೆವ ಒಬ್ಬ ಮನುಷ್ಯನು ಸಮಗ್ರ ಕ್ರಾಂತಿಕಾರಕನಾಗಿ ಪರಿಣಮಿಸ ಬೇಕಾದರೆ, ಏನಿದದ್ಭುತ ? ಊರಿಂದೂರಿಗೆ ಹೋಗುವಾಗ ಅವರ ಕೀರ್ತಿಯು ಕಹಳೆ ಅವರಿಗಿಂತ ಮುಂದೆ. ಅವರ ಕೀರ್ತಿ ಕೇಳದ ಕೃಷೀವಲನಿಲ್ಲ. ಇಂಥ ಸರ್ವ ಶ್ರೇಷ್ಠ, ಸಂಘಟನಾಕುಶಲ, ವೈಭವಸಂಪನ್ನ ತರುಣನು ಐಷಆರಾಮದ ಕೊಳಚಿ ಯಲ್ಲಿ ಹೊರಳಾಡುವುದಕ್ಕಿಂದ ದೇಶಸೇವೆಯಲ್ಲಿ ವಿರಾಮವಿಲ್ಲದೆ ದೇಹವನ್ನು ದಂಡಿ ಸುವುದೆಂದರೆ ಆಶ್ಚರ್ಯವಲ್ಲವೇ ? ನಾಡಿಗದೊಂದು ಭಾಗ್ಯವಲ್ಲವೇ ?

---

## ಅರಮನೆಯಿಂದ ಸೆರೆಮನೆಗೆ

ಪಂಡಿತ ಜವಾಹರಲಾಲರಿಗೆ ಸಾರ್ವಜನಿಕ ಕಾರ್ಯದ ಹುಚ್ಚು ಹೆಚ್ಚು. ರಾಷ್ಟ್ರಾನುರಾಗವು ಯಾವಾಗಲೂ ಅವರಲ್ಲಿ ಮನೆಮಾಡಿತ್ತು. ಅದರ ಸೆಲೆಯೊಡೆದು ಆ ಅಭಿಮಾನಗಂಗೆಯು ದೇಶದಲ್ಲಿ ಎಲ್ಲೆಲ್ಲಿಯೂ ಹಬ್ಬಿ ಹರಿಯುಬೇಕಾದರೆ ಹೊರಗಿನ ಸ್ಪರ್ಶವು ಸ್ವಲ್ಪ ಬೇಕಿತ್ತು. ಅದು ಅಸಹಕಾರದಿಂದ ಸಿಕ್ಕಿತು. ಅವರು ಕೂಡಲೆ ಮಹಾತ್ಮರನ್ನು ಹಿಂಬಾಲಿಸಿದರು. ದೇಶದ ಪ್ರಮುಖ ಕಾರ್ಯಕರ್ತ ರಲ್ಲಿ ಒಬ್ಬರೆಂದು ಕೀರ್ತಿವೆತ್ತರು. ಮಗನ ನಿಷ್ಠೆಯ ಪರಿಣಾಮವು ತಂದೆಯ ಮೇಲಾಗಿ ಅವರೂ ಅಸಹಕಾರವನ್ನು ಎತ್ತಿ ಹಿಡಿದರು. ಮಹಾತ್ಮರು ದೊಡ್ಡ ದೊಂದು ಕುಸ್ತಿಯನ್ನೊಗೆದಂತಾಯಿತು. ತಂದೆಯನ್ನು ಮಗನು ಈ ತೆರನಾಗಿ ಗೆದ್ದ ಉದಾಹರಣೆಗಳು ಬಹಳ ವಿರಳ. ೧೯೨೦ರಲ್ಲಿ ಆಗ್ರಾದಲ್ಲಾದ ರಾಜ ಕೀಯ ಪರಿಷತ್ತಿನಲ್ಲಿ ಮಾತನಾಡುವಾಗ "ನಾನು ಇಂಗ್ಲಂಡದಲ್ಲಿ ಅಭ್ಯಾಸ ಮಾಡುತ್ತಿದ್ದಾಗಿನಿಂದ ನಮ್ಮ ದೇಶದ ದಾಸ್ಯಮೋಚನದ ಅನೇಕ ವಿಚಾರಗಳು ನನ್ನ ಮನಸ್ಸಿನಲ್ಲಿ ಬರುತ್ತಿದ್ದವು. ನಮ್ಮ ನಾಡು ಸ್ವತಂತ್ರವಾಗುವ ಮಂಗಲ ದಿನವು ಎಂದು ಬಂದೀತು, ಮತ್ತು ನಾನು ಅದರಲ್ಲಿ ಎಂದು ಕೆಲಸಮಾಡಿಯೇನು ಎಂಬ ಆತುರವು ನನ್ನನ್ನು ಬಾಧಿಸುತ್ತಿತ್ತು." ಎಂಬದಾಗಿ ಜವಾಹರಲಾಲರು ಹೇಳಿದರು. ಈ ಅವರ ಆತುರವು ಅಸಹಯೋಗಕಾರ್ಯಕ್ರಮದಿಂದ ಪರಿಪೂರ್ಣ

ವಾಯಿತು. ಅವರು ಅಂಗೀಕರಿಸಿದ ಈ ವ್ರತವು ಕಠಿಣವಿದೆ. ಆದರೆ “ ಅಡಿಯ ಮುಂದಿಡೆ ಸ್ವರ್ಗ, ಅಡಿಯ ಹಿಂದಿಡೆ ನರಕ, ಸಲೆ ದೇಶಕಾರ್ಯಕ್ಕೆ ಮಡಿಯಲೇ ಬೇಕು ” ಎಂಬ ನಿಶ್ಚಯವನ್ನು ಮಾಡಿ ಮುಂದೆ ಬಂದವರಿಗೆ ಇದು ಅರಿಯದ ಮಾತೇ ? ಮಂದಿಯ ಮಾತಿಗೆ ಕಿವಿಗೊಟ್ಟು, ತನ್ನಲ್ಲಿ ನಿಜವಾದ ತಳಮಳವಿಲ್ಲದೆ ಚಳವಳದಲ್ಲಿ ಅಡಿಯಿಟ್ಟವರು ಸ್ಥಿರವಲ್ಲ. ಅವರು ಗಾಳೀಪಟದಂತೆ ಗೋತೀ ತಿನ್ನುವದು ಖಂಡಿತ. ಜವಾಹರಲಾಲರು ಪರಪ್ರತ್ಯಯನೇಯಬುದ್ಧಿಗಳಲ್ಲ. ಸ್ವತಃ ಸಾರಾಸಾರ ವಿಚಾರಮಾಡಿ ಸದಯಾಂತಃಕರಣದಿಂದ ಇದರಲ್ಲಿ ಸೇರಿದವರು. ಅವರ ಕೃತಿಯಲ್ಲಿ ಅಪಸ್ವರಬರುವದು ಸಾಧ್ಯವೇ ಇಲ್ಲ.

ಕಲ್ಕತ್ತೆಯ ವಿಶೇಷ ಅಧಿವೇಶನದ ನಂತರ ದೇಶದಲ್ಲಿ ಚಳವಳವು ಸ್ವಲ್ಪ ಜೋರಿನಿಂದ ನಡೆಯಿತು. ಅಸಹಕಾರದ ಆಂದೋಲನದಲ್ಲಿ ಅನೇಕರನ್ನು ಸೇರಿಸುವ ಜಯಶೀಲ ಪ್ರಯತ್ನಗಳು ಆದವು. ಮೂರು ಮಾಸಗಳ ನಂತರ ನಾಗಪುರದಲ್ಲಿ ಕೊಂಗ್ರೆಸ್ಸಿಗೆ ಹೊಸ ಹೊಸ ಭಕ್ತರು ದೊರಕಿದರು. ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನಲ್ಲಿ ಶಾಲೆಕೋಲೇಜುಗಳನ್ನು ಬಹಿಷ್ಕರಿಸಬೇಕೆಂಬ ನಿರ್ಣಯವಾಯಿತು. ಅಸಹಕಾರದ ಬೇಗೆಯು ಭುಗಿಭುಗಿಲೆಂದು ಉರಿಯ ಹತ್ತಿತು. ನಾಗಪುರದ ನಿರ್ಣಯಗಳಿಂದ ನಾಡು ಒಂದು ಅಡಿಯನ್ನು ಮುಂದೆ ಇಟ್ಟಿತು. ಸರಕಾರದವರು ರಾಜಮನೆತನಕ್ಕೆ ಸೇರಿದ ಡ್ಯೂಕ್ ಆಫ್ ಕನ್ನಾಟರನ್ನು ಆಮಂತ್ರಿಸಿ ಪ್ರಜೆಗಳಿಗೆ ಅವರ ಸ್ವಾಗತಮಾಡಹೇಳಿದರು. ಕೊಂಗ್ರೆಸಿನವರು ಪ್ರಜೆಗಳಿಗೆ ಅವರ ಬಹಿಷ್ಕಾರಮಾಡಬೇಕೆಂದು ಬೋಧಿಸಿದರು. ಆಳರಸರಿಗೆ ಇದರಲ್ಲಿ ಸಂಪೂರ್ಣ ಸೋಲು ಸಹಿಸಬೇಕಾಯಿತು. ಇದರಿಂದ ಕೊಂಗ್ರೆಸ್ಸೆಂದರೆ ಕೆಲಸವಿಲ್ಲದವರ ಕೂಟ, ಮುಂದಾಳುಗಳ ಸಭೆಯಲ್ಲ ಎಂಬ ಸರಕಾರದವರ ಕಾಯಾಸವು ಬುನಾದಿಯಿಲ್ಲದ್ದೆಂದು ನಿಶ್ಚಯವಾಯಿತು. ನಾಡಿನ ಮೇಲೆ ಕೊಂಗ್ರೆಸ್ಸಿನ ಹಿಡಿತವು ಯಾವ ಬಗೆಯದ್ದಿರುತ್ತದೆಂಬುದು ಸ್ವತಸ್ಸಿದ್ಧವಾಯಿತು. ಜನರು ಗುಂಪುಗೂಡಿ ಮಹಾತ್ಮರು ಹೋದಹೋದಲ್ಲಿ ಅವರ ಬೋಧಾಮೃತವನ್ನು ಕೇಳಿ ತಮ್ಮ ತರಣೋಪಾಯವನ್ನು ತಿಳಿದು ಕೊಳ್ಳಲು ಓಡುವರು. ಹಿಂದಕ್ಕೆ ಗೋವಳರು ಗೋಪಾಲನ ಬೆಂಬತ್ತಿ ಹೋದಂತೆ, ಕೃಷ್ಣನ ಕೊಳಲ ಗಾನಕ್ಕೆ ಗೋಪಿಯರು ಮನಸೋತಂತೆ ಪ್ರಜೆಗಳ ಅವಸ್ಥೆ

ಯಾಗುವುದು, ಮಹಾತ್ಮನು ಒಡನುಡಿವುದನ್ನು ಕೇಳಿದರೆ, ಹಿಂದೀ ಜನಾಂಗದ ಹೃದಯಸಿಂಹಾಸನವನ್ನೇರಿ ಕೂತಿಹನು ಮೋಹನನು. ಅವನು ನಾಡಿನ ನುಡಿಯಲ್ಲಿ ತಾನು ಕಂಡುಂಡ ತತ್ತ್ವಗಳ ತಿರುಳನ್ನು ಕರುಳಿಗೆ ತಾಗುವಂತೆ ತಿಳಿಯಾಗಿ ತಿಳಿಸುವನು. ಅವನೆತ್ತಿದ ನಾಡಗುಡಿಯ ನೆರಳಲ್ಲಿ ಜನರು ನೆರೆವರು. ನಾಡೆಲ್ಲ **ಒಂದೆಂಬ ಮೂಲ ಪಾಠವನ್ನು ಮರೆಯದಂತೆ** ಕಲಿಸಿದನು. ಮುಟ್ಟಬೇಡತನಕ್ಕೆ ಮುಟ್ಟುಗೋಲಿಕ್ಕಿದನು. ಸ್ತ್ರೀ ಸ್ವಾತಂತ್ರ್ಯದ ನೆಲೆಬೆಲೆಗಳನ್ನು ತಿಳುಹಿದನು. ನಾಡಿಗೆ ಸ್ವಾವಲಂಬನ, ಸಹನಗುಣಗಳ ಗೌರವವನ್ನು ಗುರುತಿಸಹಚ್ಚಿದನು. ಒಂದು ಮಾಡಿ ಇನ್ನೊಂದು ಮಾಡಲಿಲ್ಲವೆಂದಲ್ಲ. ಆತ್ಮಶಕ್ತಿಯ ದಿವ್ಯಜ್ಯೋತಿಯನ್ನು ಬೆಳಗಿ ಅದರ ಪ್ರಕಾಶದಲ್ಲಿ ನಾಡಿನ ಅಂಗಾಂಗಗಳನ್ನೂ ಪರೀಕ್ಷಿಸಿ ದಾರಿದೋರುತ್ತಿರುವನು. ಇಂತಹ ಕರ್ಮವೀರನ ನೇತೃತ್ವದಲ್ಲಿ ಕಾಂಗ್ರೆಸ ಕಳೆಗುಂದಬಹುದೇ ? ಇರಲಿ. ಕನ್ನಾಟರ ಬಹಿಷ್ಕಾರವಾದೊಡನೆ ಬೆಜವಾಡದ ಕಾರ್ಯಕ್ರಮಕ್ಕೆ ಆರಂಭವಾಯಿತು. ದೇಶಸೇವೆಗಾಗಿ ಮಹಾತ್ಮರು ಒಂದು ಕೋಟಿ ರೂಪಾಯಿಗಳ ನಿಧಿಯನ್ನು ಕೂಡಿಸಬೇಕೆಂದು ನಿರ್ಣಯಿಸಿ ಧನಸಂಗ್ರಹ ಮಾಡಹತ್ತಿದರು. ಕ್ಲಪ್ತಕಾಲದೊಳಗೆ ಗೊತ್ತು ಮಾಡಿದ್ದಕ್ಕಿಂತ ಹೆಚ್ಚು ಹಣವು ಕೊಡಲ್ಪಟ್ಟಿತು ! ಕೊಂಗ್ರೆಸ್ ಸಭಾಸದರ ಸಂಖ್ಯೆಯು ಬೆಳೆಯಿತು.

ಸಪ್ಟೆಂಬರ ತಿಂಗಳಲ್ಲಿ ಅಲ್ಲೀಬಂಧುಗಳನ್ನು ಸರಕಾರದ ಸೇವಕರಿಗೆ ನೌಕರಿಯನ್ನು ಬಿಡಲು ಉಪದೇಶಿಸಿದರೆಂಬ ಆರೋಪವಿಟ್ಟು ಸೆರೆಹಿಡಿದು ನಿರ್ಬಂಧಿಸಿದರು. ಕೊಂಗ್ರೆಸ್ ಕಾರ್ಯನಿರ್ವಾಹಕ ಮಂಡಲದವರು ಪ್ರತಿಯೊಂದು ಪ್ರಾಂತದವರೂ ತಮ್ಮ ತಮ್ಮ ಹೊಣೆಗಾರಿಕೆಯ ಮೇಲಿನಿಂದ ಕರನಿರಾಕರಣ ಸಹಿತವಾದ ಸತ್ಯಾಗ್ರಹವನ್ನು ಪ್ರಾರಂಭಿಸಬಹುದೆಂದು ಪ್ರಕಟಿಮಾಡಿದರು. ಡೂಕ್ ಆಫ್ ಕನ್ನಾಟರಿಗೆ ಸಿಕ್ಕ ಸಂಭಾವನೆಯು ಸಾಲದುದಕ್ಕೆ ಪ್ರಭುತ್ವದವರು ತಮ್ಮ ಕೈಗೂಂಬೆಗಳಾದ ಮಂದಪಕ್ಷದವರ ಹಿತವಚನಗಳನ್ನು ಸಹ ಕೇಳದೆ ಯುವರಾಜರನ್ನು (Prince of wales) ಇಲ್ಲಿಗೆ ಆಮಂತ್ರಿಸಿದರು. ಕೊಂಗ್ರೆಸಿನವರು ಇದಕ್ಕೆ ಸಮರ್ಪಕವಾದ ಉತ್ತರವನ್ನು ಕೊಟ್ಟರು. ಅವರು ಬಂದಾಗ ಸಮಗ್ರ ಭಾರತದಲ್ಲಿ ಹರತಾಳವನ್ನು ಕೈಕೊಳ್ಳಬೇಕೆಂದು ನಿರ್ಣಯ

ವಾಯಿತು. ರಾಜಪುತ್ರನಿಗೆ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಂಚರಿಸುವಾಗ ತಾನು ಸ್ಮಶಾನದಲ್ಲಿ ಸಾಗುತ್ತಿರುವೆನೋ ಏನೋ ಎಂಬಂತೆ ಭಾಸವಾಗುವಷ್ಟು ಭಯಂಕರವಾಗಿ ಹರತಾಳವು ಆಚರಿಸಲ್ಪಟ್ಟಿತು. ಎಲ್ಲಿ ನೋಡಿದಲ್ಲಿ ಬಾಗಿಲಿಗೆ ಬೀಗವಿಕ್ಕಿದ ಬೀದಿಗಳು ! ಪ್ರಜೆಗಳಿಲ್ಲದ ಪೇಟೆ ! ಅರಸುಮಗನು ಸ್ವಾಗತದ ಸವಿಯನ್ನುಣ್ಣುವುದೆಂತು ? ಆಳರಸರು ಬಾವೀತೋಡಿ ಬೇತಾಳ ಕಂಡರು ! ಸೋತು ಸಣ್ಣವಾದರು! ಕೋಪದಿಂದ ಕೆಂಡದಂತಾದರು ! ಕೂಡಲೇ ಸಂತಾಪದಿಂದ ಲಾಲಾಲಜಪತರಾಯ, ದೇಶಬಂಧು ದಾಸ, ಇವರನ್ನು ಸೆರೆಹಿಡಿದರು. ವಿದೇಶೀವಸ್ತ್ರದ ಬಹಿಷ್ಕಾರದಿಂದ ನಾಡಿನ ಮುಂದಾಳುಗಳು ಅದಕ್ಕುತ್ತರವಿತ್ತರು. ಸ್ವಯಂಸೇವಕರನ್ನು ಸೇರಿಸಿ ಅವರದೊಂದು ಸಂಘಟನವುಂಟುಮಾಡಲಾಯಿತು. ಸಾವಿರಾರು ತರುಣರು ಸ್ವಯಂಸೇವಕರಾಗಿ ಮುಂದೆ ಬಂದರು. ಆಗ ಸರಕಾರದವರು ಬಂಗಾಲ, ಪಂಜಾಬ ಮತ್ತು ಸಂಯುಕ್ತ ಪ್ರಾಂತಗಳ ಸ್ವಯಂಸೇವಕ ಸಂಘಗಳನ್ನು ಕಾನೂನಿಗೆ ವಿರೋಧೀ ಸಂಸ್ಥೆಗಳೆಂದು ನಿರ್ಣಯಿಸಿದರು. ಆದರೂ ತರುಣರ ಉಬ್ಬಾಳುತನವು ದುರ್ದಮನೀಯವಾಗಿದ್ದಿತು. ಏಕೆಂದರೆ ಪಂ. ಜವಾಹರಲಾಲರಂಥ ತರುಣರು ಅವರ ಮುಂದಾಳಾಗಿದ್ದರು. ಆದ್ದರಿಂದ ಅವರನ್ನೇ ಸೆರೆಮನೆಗಟ್ಟುವುದು ಲೇಸೆಂದು ಆಳರಸರಿಗೆ ಕಂಡಿತು.

ಅರಸುಮಗನು ಅಲ್ಹಾಬಾದಿಗೆ ಬಂದನು. ಇಲ್ಲಿಯೂ ಕ್ರಮಪ್ರಕಾರವಾಗಿ ಮೆರವಣಿಗೆ ಮುಂತಾದ ಸಂಭ್ರಮಗಳಿಂದ ರಾಜಪುತ್ರನ ಸ್ವಾಗತಮಾಡಬೇಕೆಂದು ಆಳರಸರು ನಿಶ್ಚಯಿಸಿದ್ದರು. ಆದರೆ ಜವಾಹರಲಾಲರೂ ಮೋತಿಲಾಲರೂ ಪ್ರಯಾಗದಲ್ಲಿರುವಾಗ ತಮ್ಮ ಈ ಹಂಚಿಕೆಗಳೆಲ್ಲ ಕನಸುಗಳೇ ಆಗಿ ಉಳಿಯುತ್ತವೆಂದು ನೆರೆನಂಬಿ ಇವರಿಬ್ಬರನ್ನು ಮೊದಲು ಸೆರೆಮನೆಗಟ್ಟುವ ಕಾರ್ಯಕವನ್ನು ಕೈಕೊಂಡರು. ಮತ್ತು ೧೯೨೧ರಲ್ಲಿ ತಂದೆ,ಮಗ ಇಬ್ಬರಿಗೂ ಸೆರೆಹಿಡಿದು ಆರು ತಿಂಗಳು ಶಿಕ್ಷೆ ವಿಧಿಸಿ ತುರಂಗದಲ್ಲಿಟ್ಟರು. ಆದರೆ ಅದರಿಂದ ಪ್ರಜೆಗಳ ಉತ್ಸಾಹ ಕುಗ್ಗಲಿಲ್ಲ, ಬಹಿಷ್ಕಾರದ ಬುದ್ಧಿಗೆ ಪ್ರೋತ್ಸಾಹಕೊಟ್ಟಂತಾಯಿತು. ಜನಮನದಲ್ಲಿ ಒಂದು ಬಗೆಯ ರೊಚ್ಚು ಉತ್ಪನ್ನವಾಯಿತು. ನೆಹರುಗಳ ಅರಮನೆಯಾದ “ ಆನಂದ ಭವನ”ದ ಮಾರ್ಗವಾಗಿಯೇ ಮೆರವಣಿಗೆಯು ಮುಂದರಿಸಿ ಹೋಗುವುದೆಂದರಿತು, ಊರ ಸ್ವಯಂಸೇವಕರೆಲ್ಲ ಸೇರಿ “ನೋ ವೆಲ್‌ಕಮ್ ಟು ದಿ ಪ್ರಿನ್ಸ್ ”

ಎಂಬ ಅಕ್ಷರಗಳನ್ನು ತಗಡಿನಲ್ಲಿ ಕೊರೆದು ಅದರ ಮುದ್ರೆಯನ್ನು ಆನಂದ ಭವನದ ಹೊರಭಾಗದ ಗೋಡೆಗಳಿಗೆ ಎಲ್ಲರಿಗೂ ನಿಚ್ಚಳವಾಗಿ ಕಾಣುವಂತೆ ಅಂಟಿಸಿದರು. ರಾಜಪುತ್ರನು ಬಂದಂದು ಪ್ರಯಾಗದಲ್ಲಿ ಕಪ್ಪುನಿಶಾನೆಗಳ ಮೆರವಣಿಗೆಯಾಯಿತು. ಅವನು ಹಾದು ಹೋಗುವ ಬೀದಿಯಲ್ಲಿ ಸ್ಮಶಾನಶಾಂತತೆಯು ನೆಲೆಗೊಂಡಿತ್ತು. ಬಹಿಷ್ಕಾರವು ಇಷ್ಟು ಯಶಸ್ವಿಯಾಗಿ ಪರಿಣಾಮವನ್ನು ಇನ್ನೆಲ್ಲಿಯೂ ಮಾಡಿರಲಿಕ್ಕಿಲ್ಲ. ತಂದೆಮಕ್ಕಳಿಬ್ಬರಿಗೂ ಕೊಟ್ಟ ಶಿಕ್ಷೆಯು ಸಂಪೂರ್ಣವಾಗುವುದರೊಳಗಾಗಿಯೇ ಬಿಡುಗಡೆಯಾಯಿತು. ಈ ಮೇರೆಗೆ ನಮ್ಮ ಚರಿತ್ರನಾಯಕನಿಗೆ ದೇಶಸೇವೆಯ ಮೊದಲನೇ ದೀಕ್ಷೆಯು ಸಿಕ್ಕಂತಾಯಿತು. ಈ ನಂತರ ಕೆಲವು ದಿನಗಳಲ್ಲಿಯೇ (೧೯೨೨) ಯಾವುದೋ ಒಂದು ಕುಂಟು ನೆವದಿಂದ ಅವರಿಗೆ ೨೧ ತಿಂಗಳ ಕಾರಾಗ್ರಹವಾಸದ ಶಿಕ್ಷೆಯಾಯಿತು. ಅದು ಹೇಗೆಂದರೆ:—

ರಾಷ್ಟ್ರೀಯ ಸಭೆಯವರು ವಿದೇಶವಸ್ತ್ರ ಬಹಿಷ್ಕಾರವನ್ನು ಬೋಧಿಸಿದ್ದರಿಂದ ನಾಡಿನಲ್ಲೆಲ್ಲ ಪ್ರಚಂಡ ಚಳವಳವು ಪ್ರಾರಂಭವಾಯಿತು. ಬಂಗಾಲ ಪ್ರಾಂತದಲ್ಲಿ ಈ ಘೋರ ಅಪರಾಧಕ್ಕಾಗಿ (!) ಸಾವಿರಾರು ತರುಣರು ತುರಂಗ ಕಂಡರು. ಪ್ರಯಾಗದಲ್ಲಿ ಈ ಚಳವಳವು ಸುರುವಾದ ಕೂಡಲೆ ವಸ್ತ್ರವ್ಯಾಪಾರದವರು ತಮ್ಮ ಜಾಹೀರ ಸಭೆಯನ್ನು ಕರೆದು ಒಂದು "ವ್ಯಾಪಾರ ಮಂಡಳ"ವನ್ನು ಸ್ಥಾಪಿಸಿದರು. ಈ ಮಂಡಲದವರು "ತಮ್ಮ ಪೈಕಿ ಯಾವ ವರ್ತಕನೂ ವಿದೇಶೀ ವಸ್ತ್ರಗಳನ್ನು ತರಿಸಕೂಡದು. ಮತ್ತು ಯಾವನು ಈ ನಿರ್ಣಯವನ್ನು ಬದಿಗೊತ್ತಿ ನಡೆಯುವನೋ ಅವನು ಮಂಡಳದವರು ಗೊತ್ತುಮಾಡಿದ ದಂಡವನ್ನು ತೆತ್ತಬೇಕು. ಅವನ ಅಂಗಡಿಯೆದುರು ಪಿಕೆಟಿಂಗ ಕೂಡ ಮಾಡಬಹುದು" ಎಂಬದಾಗಿ ನಿಶ್ಚಯಿಸಿದರು. ಈ ನಿಯಮದಂತೆ ವ್ಯಾಪಾರಮಂಡಳದವರು ಎಷ್ಟೋ ಉನ್ಮಾರ್ಗಗಾಮಿಗಳನ್ನು ಶಿಕ್ಷಿಸಿದ್ದರು. ಮುಂದೆ ಕೆಲವು ವರ್ತಕರು ಈ ಕರಾರನ್ನು ಮುರಿದು ಗುಂಪುಮಾಡಿ ವಿದೇಶೀ ವಸ್ತ್ರಗಳನ್ನು ತರಿಸಹತ್ತಿದರು. ಮತ್ತು ಮನಬಂದಂತೆ ವ್ಯಾಪಾರ ಮಾಡಹತ್ತಿದರು. ಆದರೆ ವ್ಯಾಪಾರ ಮಂಡಳದವರು ತಮ್ಮ ನಿರ್ಣಯದ ಮೇರೆಗೆ ಪಿಕೆಟಿಂಗ ಸುರು ಮಾಡಿದರು. ಅದಕ್ಕೆಲ್ಲ ಪಂಡಿತ ಜವಾಹರಲಾಲರೇ ಅಧ್ವರ್ಯುಗಳು. ಪಿಕೆಟಿಂಗ ಕೆಲಸವು ಬಹಳ ಜಯಶೀಲವಾಗಿ ನಡೆಯಿತು. ಸರಕಾರದವರು ಮಾತ್ರ ಹುಚ್ಚನಾಯಿಯಂತಾಗಿದ್ದರು. ದೇಶದಲ್ಲೆಲ್ಲ ಕಲಬಲ

ದಿಂದ ಗಾಬರಿಗೊಂಡು ಸಿಕ್ಕವರನ್ನು ಸೆರೆಹಿಡಿದು ಹಾಕುವುದೊಂದು ಉದ್ಯೋಗವು ಬಹಳ ಜೋರಾಗಿ ನಡೆದಿತ್ತು. ಜವಾಹರಲಾಲರ ನಾಯಕತ್ವದಲ್ಲಿ ನಡೆದ ಪಿಕೆಟಿಂಗ ಅತ್ಯಂತ ಶಾಂತವಾಯಿತು. ಇಂತಹ ಶಾಂತವರ್ತನವನ್ನು ಕೂಡ ಲೆಕ್ಕಿಸದೆ ಸರಕಾರದವರು ಅವರನ್ನು ನಿರ್ಬಂಧಿಸಿ ಅವರ ಮೇಲೆ ಖಟ್ಲೆ ಮಾಡಿದರು. ಮಾನಗೇಡಿಗಳಾದ ಕೆಲವು ವರ್ತಕರು ನಮ್ಮನ್ನು ಹೊಡೆಯುತ್ತೇವೆ,ಬಡೆಯುತ್ತೇವೆಂದು ಹೆದರಿಸಿ ಜವಾಹರಲಾಲರು ವಿದೇಶೀ ವಸ್ತ್ರಗಳ ವ್ಯಾಪಾರ ಮಾಡದಂತೆ ಪಿಕೆಟಿಂಗ ನಡೆಸಿದ್ದಾರೆಂಬುದಾಗಿ ಸರಕಾರದಲ್ಲಿ ದೂರು ಹೇಳಿದರಂತೆ- ಆದ್ದರಿಂದ ಅವರ ಫಿರ್ಯಾದಿಗಳ ಮೇಲಿಂದ ಜವಾಹರಲಾಲ ಮುಂತಾದವರ ಮೇಲೆ ಕೆಲವು ಆರೋಪಗಳನ್ನೊಡ್ಡಿದರು. ಆ ಬಗ್ಗೆ ತಮ್ಮ ಹೇಳಿಕೆಯನ್ನು ಕೊಡುವಾಗ ವಚನಭ್ರಷ್ಟ ವರ್ತಕರ ಸೊಲ್ಲ ನಡಗಿಸಿದರು"ನಮ್ಮ ಹಾದಿಯು ಹೇಳಿಕೇಳಿ ಅನತ್ಯಾಚಾರದ್ದು. ಪ್ರೇಮತ್ಯಾಗಗಳೇ ನಮ್ಮ ಶಸ್ತ್ರಾಸ್ತ್ರ. ಆರೋಪಗಳನ್ನು ಸಿದ್ಧಮಾಡಲಿಕ್ಕೆ ಪ್ರಯಾಗದೊಳಗಿನ ಒಂದು ನರಪ್ರಾಣಿಯಾದರೂ ಬರಬೇಕಷ್ಟೇ ? ಅದಿರಲಿ; ಸ್ವತಃ ಸಿ. ಐ. ಡಿ. ಅಧಿಕಾರಿಗಳ ಸಾಕ್ಷಿಯವರಿಗೆ ಕೂಡ ಅವುಗಳನ್ನು ಸಿದ್ಧಮಾಡಿ ತೋರುವದಾಗಲಿಲ್ಲ. ನಾವು ಪಿಕೆಟಿಂಗ ಮಾಡಿದೆವೇನೋ ಹೌದು. ಆದರೆ ಅತ್ಯಂತ ಶಾಂತತಾಮಯ ಮತ್ತು ಪೂರ್ಣ ವಿನಯಶೀಲ ರೀತಿಯಿಂದ. ನೀವು ಯಾರು ಫಿರ್ಯಾದಿಕೊಟ್ಟಿದ್ದಾರೆಂದು ಹೇಳುತ್ತೀರೋ ಅಂಥ ಒಬ್ಬ ವರ್ತಕನೂ ತಮಗಾದ ಕಷ್ಟಗಳನ್ನು ಹೇಳಲು ಮುಂದೆ ಬರಲಿಲ್ಲ. ಆದ್ದರಿಂದ ಈ ಕಾನೂನನ್ನು ಶಾಂತಯುಕ್ತ, ವಿನಯಶೀಲ ರೀತಿಯಿಂದ ನಡೆಸುವ ಪಿಕೆಟಿಂಗನ್ನೆ ನಿಲ್ಲಿಸಬೇಕೆಂಬ ಹಟದಿಂದ ಹೂಡಿದ್ದೆಂದು ತೋರುತ್ತದೆ. ಈ ಬಗೆಯ ಪಿಕೆಟಿಂಗಿಗೆ ಇಂಗ್ಲಂಡಿನಂತೆ ಈ ದೇಶದಲ್ಲಿಯೂ ಎಡೆಯಿರಬೇಕು. ಇಂಥ ಕೆಲಸವನ್ನು ಮಾಡಿರಿ, ಇಂತಹದನ್ನು ಮಾಡಬೇಡಿರಿ ಎಂದು ಜನರಿಗೆ ಉಪದೇಶಮಾಡುವ ಅಧಿಕಾರವು ನಮಗಿದ್ದೇ ಇದೆ. ಇದರ ಸಲುವಾಗಿ ಸರಕಾರದವರು ಏನು ಮಾಡಿದರೂ ನಾವು ಕೇಳುವಂತಿಲ್ಲ. ನಮ್ಮ ಸ್ವತಸ್ಸಿದ್ಧವಾದ ಮೂಲ ಹಕ್ಕುಗಳ ರಕ್ಷಣೆಯನ್ನು ನಾವು ಮಾಡಲೇಬೇಕು." ಎಂದು ಹೇಳಿಕೆಯನ್ನು ಹೇಳಿದರು. ಇದು ಎಷ್ಟು ನ್ಯಾಯಶೀಲವಾಗಿದ್ದರೂ ವಿವೇಕಕ್ಕೆ ಸರಿಯಾಗಿದ್ದರೂ ಅದನ್ನು ಗಮನಿಸುವವರು ಸರಕಾರದವರೆಂದಮೇಲೆ ಎಷ್ಟರಮಟ್ಟಿಗೆ ಅವರ ಮೇಲೆ ಇದರ ಪರಿಣಾಮವಾದೀ

ತೆಂಬುದು ಗೊತ್ತಿದ್ದ ಮಾತೇ ಆಗಿದೆ. ಜವಾಹರಲಾಲರ ಮೇಲೆ ಹೊರಿಸಿದ ಆರೋಪಗಳು ದೃಢವಾದವು! ಅವರಿಗೆ ೨೧ ತಿಂಗಳು ಕೈದಿನ ಶಿಕ್ಷೆಯನ್ನು ವಿಧಿಸಿದರು. ಅದನ್ನವರು ಒಂಬತ್ತು ತಿಂಗಳು ಅನುಭವಿಸಿದ ಬಳಿಕ ಕೆಲವು ಸ್ನೇಹಿತರೊಂದಿಗೆ ಅವರನ್ನು ಬಿಟ್ಟುಕೊಟ್ಟರು.

ದೇಶದಲ್ಲಿ ಈ ಬಗೆಯ ಆಂದೋಲನವು ನಡೆದಿರುವಾಗ ಸರಕಾರದವರು ಏನೂ ಕಾರಣಗಳನ್ನು ಕೊಡದೆ ನಾಭಾದ ಮಹಾರಾಜರಾದ ರಿಪುದಮನ ಸಿಂಗರನ್ನು ಹದ್ದುಪಾರ ಮಾಡಿದರು. ಇದರಿಂದ ಶೀಖ ಸಮಾಜವು ತಳಮಳಗೊಂಡಿತು. ಮತ್ತು ಜೈತೋ ಇಲ್ಲಿಯ ಗುರುದ್ವಾರದ ಅಕಾಲೀ ಶೀಖರು ವೀರ ಸತ್ಯಾಗ್ರಹವನ್ನು ಸುರು ಮಾಡಿದರು. ಜಥಾದ ( ಗುಂಪು ) ಮೇಲೆ ಜತಗಳು ಅಲ್ಲಿಗೆ ಸಾಗಹತ್ತಿದವು. ನಾಭಾ ಸಂಸ್ಥಾನದವರು ಈ ಜತಗಳು ಕಾನೂನು ಬಾಹ್ಯ ಕೂಟಗಳೆಂದು ಪ್ರಕಟ ಮಾಡಿ ಜತದ ಮೇಲೆ ಜತಗಳನ್ನು ಹಿಡಿದು ನಿರ್ಬಂಧಿಸಿದರು. ಜತದ ಜನರನ್ನು ಅತ್ಯಂತ ಕ್ರೂರತನದಿಂದ ನಡೆಸುತ್ತಾರೆಂಬುದು ದೇಶದಲ್ಲೆಲ್ಲ ದಟ್ಟವಾಗಿ ಹಬ್ಬಿತು. ಮೊದಲೇ ನಾಡಿನಲ್ಲಿ ಅಸಂತೋಷದ ಸಾಮ್ರಾಜ್ಯವಿತ್ತು. ಅದರಲ್ಲಿಯೂ ಈ ಜತದ ಜನರು ಪಡುವ ಪರಿಶ್ರಮಗಳನ್ನು ಕೇಳಿ ಕಲ್ಲು ಕೂಡ ದ್ರವಿಸುವಂತಹದಿತ್ತು. ಆದ್ದರಿಂದ ಅಲ್ಲಿಯ ಸ್ಥಿತಿಯನ್ನು ಪ್ರತ್ಯಕ್ಷ ನೋಡಬೇಕೆಂಬ ಲವಲವಿಕೆಯಿಂದ ಜವಾಹರಲಾಲರು ನಾಭಾ ಸಂಸ್ಥಾನಕ್ಕೆ ಹೊರಟರು. ಸಂಸ್ಥಾನದ ಗಡಿಸೀಮೆಗೆ ಮುಟ್ಟುವಾಗಲೇ ೧೪೪ನೇ ಕಲಮು ಧುತ್ತೆಂದು ಅವರೆದುರಿಗೆ ಬಂದು ನಿಂತುಬಿಟ್ಟಿತು. ಮುಕ್ತೇಶ್ವರದಿಂದ ಜೈತೋವಿಗೆ ಹೋಗುವ ಒಂದು ಸೀಖ ಜತದೊಡನೆಯೇ ಅವರು ಹೊರಟರು. ಪೋಲೀಸರು ಒಳಗಿಂದೊಳಗೆ ಅವರ ಹೆಸರುಗಳ ವಿಳಾಸ ತಿಳಕೊಂಡರು. ಪೋಲೀಸರು ಕೇಳಿದ್ದಕ್ಕೆ ತಾವು ಜತದ ಸಭಾಸದರಲ್ಲ, ಆದರೆ ಅವರೊಡನೆ ಸುಮ್ಮನೇ ಪ್ರೇಕ್ಷಕರಾಗಿ ಬಂದವರು ಎಂದು ಹೇಳಿದರು. ಸರಕಾರದವರು ಜತವನ್ನು ಅಲ್ಲಿಯೇ ನಿಲ್ಲಿಸಿದರು. ಜವಾಹರಲಾಲರಿಗೆ ಮುಂದರಿಸಿ ಹೋಗದಂತೆ ೧೪೪ನೇ ಕಲಮಿನ ಮೇರೆಗೆ ಪ್ರತಿಬಂಧಿಸಿದರು. ಪಂಡಿತರು ತಮ್ಮಿಬ್ಬರು ಗೆಳೆಯರೊಡನೆ ಅಲ್ಲಿಯ ಧರ್ಮಶಾಲೆಯಲ್ಲಿ ಕುಳಿತುಕೊಂಡರು. ಇಷ್ಟರಲ್ಲಿಯೇ ಜಿಲ್ಹಾಧಿಕಾರಿಯು (ಕಲೆಕ್ಟರನು) ಅಲ್ಲಿಗೆ ಬಂದನು. ಮತ್ತು ೧೪೪ನೇ ಕಲಮನ್ನು ಬುದ್ಧಿಪೂರ್ವಕವಾಗಿ

ಮುರಿದಿರುವರೆಂಬ ಆರೋಪವನ್ನು ತೋರಿಸಿ ೧೪೪ನೇ ಕಲಮಿನ ಮೇರೆಗೆ ಅವ ರನ್ನು ಒಮ್ಮೆಲೇ ಸೆರೆಹಿಡಿದರು. ಅವರಿಗೆ ೧೪೪ನೇ ಕಲಮನ್ನು ಹಚ್ಚಿದ ನಂತರ ಅವರು ಎಲ್ಲೆಲ್ಲಿಯೂ ಹೋಗಲಿಲ್ಲ. ಅಲ್ಲಿಯೇ ಉಳಿದುಬಿಟ್ಟಿದ್ದರು. ಹೀಗಿರುತ್ತ ಅವರು ಯಾವ ಅರ್ಥದಲ್ಲಿ ಯಾವ ಬಗೆಯಿಂದ ಆ ಆರ್ಡರನ್ನು ಮೀರಿ ನಡೆದರೆಂ ಬುದು ಗೊತ್ತಾಗುವುದು ಶಕ್ಯವಿಲ್ಲ. ಅವರ ಜೊತೆಗಿದ್ದ ಸ್ನೇಹಿತರಿಬ್ಬರಿಗೆ ೧೪೪ನೇ ಕಲಮನ್ನು ಹಚ್ಚಿದ್ದಿಲ್ಲ ಸಹ. ಆದರೂ ಡಿ. ಮ್ಯಾಜಿಸ್ಟ್ರೇಟರು ಬಾಯಿಯಿಂದಲೇ ಆರ್ಡರ್ ಕೊಟ್ಟು ಅವರನ್ನು ನಿರ್ಬಂಧಿಸಿ ತೆಗೆದುಕೊಂಡು ಹೋದರು. ಈ ಬಗ್ಗೆ ಬರೆಯುವಾಗ ಸ್ವತಃ ಜವಾಹರಲಾಲರು "೧೪೪ನೇ ಕಲಮನ್ನು ಒಂದು ವ್ಯಕ್ತಿಗೆ ಅಥವಾ ಸ್ಥಳಕ್ಕೆ ಹಚ್ಚಿದರೆ ಮೊದಲು ಆ ವ್ಯಕ್ತಿಗೆ ಆ ಸ್ಥಳವನ್ನು ಬಿಟ್ಟು ಹೋಗಲು ನ್ಯಾಯಪ್ರಕಾರ ಹೇಳಬೇಕಾಗುತ್ತದೆ. ಆದರೆ ಇಲ್ಲಿ ಹಾಗೇನೂ ಆಗ ಲಿಲ್ಲ. ಆಜ್ಞೆಯೇ ಕೊಟ್ಟಿರಲಿಲ್ಲ. ಇದು ಜತಗಳ ವರ್ತಮಾನ. ನಮ್ಮ ಸಂಗತಿ ಪ್ರತ್ಯೇಕವೇ. ನಮಗೆ ೧೪೪ನೇ ಕಲಮು ಹಚ್ಚುವುದರೊಳಗಾಗಿ ನಮ್ಮನ್ನು ಸೆರೆ ಹಿಡಿದಿರುವರು. ಇದು ಮೊದಲನೇ ಮಾತು. ಇನ್ನು ಎರಡನೇ ಮಾತೆಂದರೆ ನಾವು ಸಂಸ್ಥಾನದ ಪ್ರಜೆಗಳೇ ಅಲ್ಲ. ನಮಗೆ ನಿಮ್ಮ ಕೋರ್ಟಿನ ನಿಯಂತ್ರ ಣವು ಇಲ್ಲ. ಈ ಅಧಿಕಾರವು ಕೇವಲ ಸಂಸ್ಥಾನಾಧಿಪತಿಗಳಾದ ಮಹಾರಾಜಾ ರಿಪುದಮನಸಿಂಗ ಇವರದಿರುತ್ತದೆ. ಈಗ ಅವರನ್ನು ಪದಚ್ಯುತಮಾಡಿದ್ದರಿಂದ ಅವರಿಗೆ ಸಹ ಈ ಅಧಿಕಾರ ನಡೆಸುವ ಹಕ್ಕಿಲ್ಲ. ಈಗ ಈ ಅಧಿಕಾರವು ಯಾರ ಹೆಸರಿನಿಂದ ನಡೆಸಲ್ಪಡುತ್ತದೆಂಬುದನ್ನೂ ಹೇಳಲಿಲ್ಲ. ಬ್ರಿಟಿಷ ಸರಕಾರಕ್ಕೆ ಸಂಸ್ಥಾನಗಳ ಕಾರಭಾರದಲ್ಲಿ ಕಾಲಿಡಲಿಕ್ಕೆ ಬರುತ್ತದೆಂಬುದನ್ನೂ ಹೇಳಲಿಲ್ಲ. ಅಂದಬಳಿಕ ಈ ಕೋರ್ಟಿನವರಿಗೆ ನನ್ನ ಮೇಲೆ ಖಟ್ಲೆ ನಡಿಸಲಿಕ್ಕೆ ಯಾವ ಅಧಿ ಕಾರವಿದೆ? ರಿಪುದಮನಸಿಂಗರ ನಂತರ ಹೇಳುವ ಅರಸಿಲ್ಲ, ಕೇಳುವ ಪ್ರಧಾನಿ ಯಿಲ್ಲವೆಂಬಂತಾಯಿತೋ?" ಎಂಬದಾಗಿ ಸ್ಪಷ್ಟ ಮಾತಾಡಿದರು. ಈ ಖಟ್ಲೆ ಯಲ್ಲಿ ಪಂಡಿತರಿಗೆ ಎರಡು ವರ್ಷ ಒಂಬತ್ತು ತಿಂಗಳಿನ ಶಿಕ್ಷೆಯಾಯಿತು. ಆದರೆ ಮುಂದೆ ಅದು ತೆಗೆದುಹಾಕಲ್ಪಟ್ಟು ಅವರ ಬಿಡುಗಡೆಯಾಯಿತು. ಇಂತು ಅವರು ರಾಜಕೀಯ ರಣಾಂಗಣದಲ್ಲಿ ಧುಮುಕಿದ ಬಳಿಕ ಒಟ್ಟು ಮೂರುಬಾರೆ ಕಾರಾ ಗೃಹವಾಸವನ್ನು ಅನುಭವಿಸಬೇಕಾಯಿತು. ಆದರೆ "ದಗ್ಧಂ ದಗ್ಧಂ ಪುನರಪಿ ಪುನಃ ಕಾಂಚನಂ ಕಾಂತವರ್ಣಂ" ಎಂಬಂತೆ ಸೆರೆಮನೆಯ ಸಂಕಷ್ಟಗಳಿಂದ

ಅವರು ಮತ್ತಷ್ಟು ತೇಜಃಪುಂಜರಾಗಿ ಬೆಳಗಹತ್ತಿದರು. ಅವರ ವಿಚಾರಗಳು ಹೆಚ್ಚು ಸ್ಥೈರ್ಯವನ್ನು ಹೊಂದಿದವು. ಅವರು ಯಾವುದಕ್ಕೂ ಮಣಿಯದಂತೆ ಏರಿ ಸಾಗುವ ಎದೆಗಾರರಾದರು. ಸ್ವಾತಂತ್ರ್ಯಸಮರದಲ್ಲಿ ತಾಳಬೇಕಾದ, ತಿನ್ನಬೇಕಾದ ಕಷ್ಟಗಳನ್ನು ಕಂಡುಣ್ಣುವ ವರೆಗೆ ಮೈಗೆ ಇರಬಹುದಾದ ಅಲ್ಪಸ್ವಲ್ಪ ಚಳಿಯು ಕೂಡ ಚದರಿಹೋದಂತಾಗಿ ಇನ್ನು ಮೇಲೆ ರಣರಂಗಶಾರ್ದೂಲರಾಗಿ ಮೈಚಳಿಬಿಟ್ಟು ಕಾದುವವರಾದರು. "ದೇಹಂ ವಾ ಪಾತಯೇಯಮ್ ಧ್ಯೇಯಂ ವಾ ಸಾಧಯೇಯಮ್" ಎನ್ನುವ ಮಜಲಿಗೆ ಬಂದು ಮುಟ್ಟಿದರು. ಹೀಗೆ ಹಂಗುದೊರೆದು ಹೋರಾಡುವ ಯೋಗವು ಭಂಗಬಡದೆ ಸಿದ್ಧಿಸುವುದೆಂತು ? ತೆಕ್ಕೆಯಿಂದ ಗಾದಿಗೂ, ಗಾದಿಯಿಂದ ಆರಾಮಕುರ್ಚಿಗೂ ಸಾಹಸಪಡುವ ಸುಖವಸ್ತುಗಳಾದ ಮಾತಿನ ಮಲ್ಲರಿಗೆ ಈ ಪುಣ್ಯಪ್ರಾಪ್ತಿಯಾಗದು. ಮೂರನೆಯ ಸಲ ಸೆರೆಮನೆಗೆ ಹೋಗುವುದಕ್ಕಿಂತ ಮುಂಚೆ ಜವಾಹರಲಾಲರೊಮ್ಮೆ ಈ ಕೆಳಗಿನ ಉದ್ಗಾರಗಳನ್ನು ತೆಗೆದಿದ್ದರು—ನನ್ನ ಪುಣ್ಯಕ್ಕೆ ಎಣೆಯಿಲ್ಲ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೇರಿ ಭಾರತಸೇವೆಯನ್ನು ಮಾಡುವುದೇ ಒಂದು ದೊಡ್ಡ ಮಾನ. ಅದರಲ್ಲಿಯೂ ಜಗದ್ವಂದ್ಯ ವಿಭೂತಿಯಾದ ಮಹಾತ್ಮರು ಎತ್ತಿದ ನಾಡಗುಡಿಯ ಕೆಳಗೆ ಕದಲದೆ ನಿಂತು ಕಾದುವುದೆಂದರೆ ಅದೊಂದು ದೊಡ್ಡ ಸರ್ವಸಿದ್ಧಿಯೋಗವೇ ಸರಿ. ಆದರೆ ಅಹಾ ! ಪರಮಪಾವನಳಾದ ಮಾತೃಭೂಮಿಗೋಸ್ಕರ ಕಷ್ಟಸಹಿಸುವುದೋ ! ಅದಕ್ಕಿಂತಧಿಕವಾದ ಆನಂದವಿನ್ನೆಲ್ಲಿಹುದು ? ಅದಕ್ಕಿಂತ ಬಲವಾದ ಭಾಗ್ಯವು ಅವಳ ಸೇವೆಯಲ್ಲಿ ಸಾಯುವದನ್ನುಳಿದು ಬೇರೆಲ್ಲಿಹುದು ? ನಮ್ಮ ಧ್ಯೇಯಪ್ರಾಪ್ತಿಯನ್ನುಳಿದು ಮತ್ತೆಲ್ಲಿರುವುದು ? ತಾಯ್ನಾಡಿನ ಸೇವೆಯಲ್ಲಿ ಬರುವ ಸಾವಿನಲ್ಲಿ ಸೌಂದರ್ಯವಿದೆ, ಸೌಭಾಗ್ಯವಿದೆ, ಸಕಲ ಸುಖಸಾಗರವಿದೆ ! ಅಂಥ ಸಾವೊಂದು ಸಾವೇ ? ಅವಳಿಗಾಗಿ ಯಾವ ತ್ಯಾಗವು ದೊಡ್ಡದು ?

---

## ತ್ರಿಮೂರ್ತಿಗಳು

ಮಹಾತ್ಮರ ಅಸಹಕಾರ ಚಳವಳಕ್ಕೆ ತೀರ ಮೊದಲು ಸೇರಿದವರಾದ್ದರಿಂದ ಇಬ್ಬರು ನೆಹರುಗಳ ಮತ್ತು ಮಹಾತ್ಮರ ನಡುವೆ ಬಹಳ ಪ್ರೀತಿಯ ಹತ್ತುಗಡೆಗಳು ಬೆಳೆದವು. ಅಸಹಕಾರಕ್ಕಿಂತ ಮುಂಚೆ ಪಂಜಾಬದ ಅತ್ಯಾಚಾರಗಳ

ವಿಚಾರಣೆಯ ಸಂದರ್ಭದಲ್ಲಿಯೇ ಅವರಲ್ಲಿ ಪರಸ್ಪರ ಪ್ರೇಮದ ಸಂಬಂಧಗಳು ನಡೆದಿದ್ದವು. ಬರಬರುತ್ತ ಈ ಮೂರು ಜೀವರಾಜರ ಪ್ರೇಮವೂ ಒಂದೇ ಹುರಿಯಲ್ಲಿ ಹೊಸೆಯಲ್ಪಟ್ಟಂತಾಯಿತು. ಮಹಾತ್ಮರ ಚಳವಳದ ಧುರದಲ್ಲಿ ನಿಂತು ತಾತ್ವಿಕ ವಿಚಾರಗಳನ್ನು ಬುದ್ಧಿಯಿಂದ ಚೆನ್ನಾಗಿ ತಿಳಿದು ಅವುಗಳು ತೀರ ನಿರ್ದುಷ್ಟವೂ ವ್ಯವಹಾರ್ಯವೂ ಆಗಿವೆಯೆಂಬುದನ್ನು ತಮ್ಮ ತಾರ್ಕಿಕ ಕುಟಿಲತನದಿಂದಲೂ ವಾದದ ಜಾಣ್ಮೆಯಿಂದಲೂ ಪ್ರಜೆಗಳ ಮೇಲೆ ಪರಿಣಾಮವಾಗುವಂತೆ ಇಡುವುದು ಮೋತಿಲಾಲರನ್ನು ಕೂಡಿತು. ಭಾವನೆಯ ನಿರ್ಭರದಿಂದಲೂ ಬುದ್ಧಿಯ ಬೆಡಗಿನಿಂದಲೂ ಅವುಗಳನ್ನು ಹಿಂಬಾಲಿಸುವವರ ಹೃದಯದಲ್ಲಿ ಅಲುಗಾಡದಂತೆ ಊರಿ ಉತ್ಸಾಹದಿಂದ ಕಾರ್ಯರಂಗಕ್ಕಿಳಿಸುವಂತೆ ಮಾಡುವುದು ಜವಾಹರಲಾಲರಿಗೆ ಮಾತ್ರ ಸಾಧ್ಯ. ಇವರೆಲ್ಲರನ್ನು ತನ್ನ ಪ್ರೇಮದ ಪ್ರಭಾವದಿಂದಲೂ ಸತ್ಯದ ಸತ್ವದಿಂದಲೂ ಅಹಿಂಸೆಯ ಆದರ್ಶದಿಂದಲೂ ನಡೆಸಿ ಜೋಡಿಸಿಕೊಂಡು ಹೋಗುವ ಹಿರಿಯತನವು ಮಹಾತ್ಮಾ ಗಾಂಧಿಯವರಿಗೆ ಮಾತ್ರ ಶಕ್ಯ. ಬಾರ್ಡೋಲಿಯ ಕಾರ್ಯಕ್ರಮದ ನಂತರ ಸ್ವಲ್ಪ ಕಾಲದಲ್ಲಿಯೇ ಮಹಾತ್ಮರನ್ನು ಸೆರೆಮನೆಗಟ್ಟಿದರು. ಆಗ ದೇಶದಲ್ಲಿ ಎಲ್ಲರೂ ಮುಂದೇನುಮಾಡಬೇಕೆಂಬುದು ತಿಳಿಯದೆ ತೊಂದರೆಗೊಳಗಾದರು. ಜವಾಹರಲಾಲರನ್ನು ಆದೇ ಬಿಟ್ಟಿದ್ದರು. ಅವರು ಅಸಹಕಾರದ ಯೋಗ್ಯ ಅರ್ಥವನ್ನು ಅಂಗೀಕರಿಸಿದ್ದರಿಂದ ಕರ್ತವ್ಯವನ್ನು ತಿಳಿಯದೇ ಸುಮ್ಮನೆ ಕೂಡುವ ಅವಸ್ಥೆಯಲ್ಲಿರಲಿಲ್ಲ. ಸಂಯುಕ್ತ ಪ್ರಾಂತದಲ್ಲಿ ಅವಿಶ್ರಾಂತ ಪರಿಶ್ರಮವನ್ನು ಮಾಡಿ ಹಳ್ಳಿಯಿಂದ ಹಳ್ಳಿಗೆ ತಿರುಗಿ ಮನೆಮನೆಗೂ ಕಾಂಗ್ರೆಸ್ಸಿನ ಕಾರ್ಯಗಳ ನೆಲೆಬೆಲೆಗಳನ್ನು ತಿಳಿಸಿ ಹೇಳಿದರು. ಅವರು ಮಾಡುತ್ತಿರುವ ಚಳವಳದ ಬೇಗೆಯನ್ನು ಸಹಿಸಲಾರದೆ ಸರಕಾರದವರು ಅವರಿಗೆ ಮರಳಿ ತುರಂಗಕ್ಕಟ್ಟಿದರು. ಆಗ ಮೋತಿಲಾಲರು ಇನ್ನೂ ಒಳಗಿದ್ದರು. ಕೆಲವು ದಿನಗಳ ಮೇಲೆ ಅವರನ್ನು ಬಂಧಮುಕ್ತ ಮಾಡಿದರು. ಆದರೆ ಅವರು ಹೊರಗೆ ಬರುವಾಗ ನಾಡಿನಲ್ಲಿ ನಿಸ್ಸಹಕಾರದ ಕಾವೇ ಆರಿಹೋಗಿತ್ತು. ಅತ್ತ ಖಿಲಾಫತ ಚಳವಳದ ತಾತ್ತ್ವಿಕವಿಚಾರಗಳ ಬುಡವೇ ಬದಲಾಗಿ ಆ ಚಳವಳಕ್ಕೆ ಮುಂದೆ ಅರ್ಥವಿಲ್ಲದಾಯಿತು. ಮಹಾತ್ಮರನ್ನು ಹಿಡಿದದ್ದ ಕ್ಕೋಸ್ಕರ ಪ್ರತ್ಯುತ್ತರವೆಂದು ತಿಳಿದು ದೇಶದಲ್ಲಿ ಕೂಡಲೆ ಸವಿನಯ ಶಾಸನಭಂಗದ ಕಾಳಗವನ್ನು ಹೂಡಬೇ

ಕೆಂದು ಕೂಗು ಎದ್ದಿತು. ಕೊನೆಗೆ ಆ ಬಗ್ಗೆ ಒಂದು ಮಂಡಲದ ನೇಮಕ ವಾಯಿತು. ಆ ಮಂಡಲದವರ ವರದಿಯ ಮೇಲಿಂದ ಶಾಸನಭಂಗಕ್ಕಿಂತ ದೇಶ ದಲ್ಲಿ ಕೌನ್ಸಿಲ ಪ್ರವೇಶದ ಹುರುಪೇ ಹೆಚ್ಚಾಗಿ ಸ್ವರಾಜ್ಯಪಕ್ಷವ ಗರ್ಭವಾಯಿತು.

ಆಗ ಮಹಾತ್ಮರು ತುರಂಗದಲ್ಲಿದ್ದರು. ಜವಾಹರಲಾಲರೂ ಹಾಗೆಯೇ. ಅವರು ಹೊರಗೆ ಬಂದೊಡನೆ ನಿರಾಶೆಯ ಚಿತ್ರವು ಕಣ್ಣೆದುರಿಗೆ ಕುಣಿಯುತ್ತಿತ್ತು. ಕೌನ್ಸಿಲ ಪಕ್ಷದವರ ಕಾರಭಾರಗಳಿಗೆ ಜಯವು ಸಿಕ್ಕು ಸ್ವರಾಜ್ಯ ಪಕ್ಷದ ಕಾರ್ಯ ಕಲಾಪಗಳು ಜೋರಾಗಿ ನಡೆಯುತ್ತಿದ್ದವು. ಮೇಲಾಗಿ ಅದಕ್ಕೆ ತನ್ನ ತಂದೆಯು ವರು ಮತ್ತು ದೇಶಬಂಧು ದಾಸರಂಥ ಚೊಕ್ಕ ಚಿನ್ನದ-ಥ ಮುಂದಾಳುಗಳು ಸೂತ್ರಧಾರಿಗಳು. ಇವನ್ನೆಲ್ಲ ನೋಡಿ ಅವರು ಮನಸ್ಸಿನಲ್ಲಿ ಮರುಗಿವರು. ನಮ್ಮ ತರುಣ ನಾಯಕರಿಗೆ ಮೂರು ಹಾದಿಗಳು ತೆರೆದು ಇದ್ದವು. ಅವರು ಸಿ. ರಾಜ ಗೋಪಾಲಾಚಾರ್ಯರಂತೆ ದಾಸನೆಹರುಗಳ ಯೋಜನೆಗಳನ್ನು ವಿರೋಧಿಸಿ ಅವನ್ನು ಕಡಿಖಂಡವಾಗಿ ಖಂಡಿಸುವುದು. ಎರಡನೆಯದಾಗಿ ದಾಸನೆಹರುಗಳ ಕಾರ್ಯ ಕ್ರಮವನ್ನೇ ಎತ್ತಿಹಿಡಿದು ದೇಶವನ್ನು ಇನ್ನಷ್ಟು ಹೆಚ್ಚು ರೀತಿಯಿಂದ ಕೌನ್ಸಿಲು ಮೋಹಗಳಲ್ಲಿ ಕೆಡವಿ ತಾನು ಆರಿಸಿ ಬಂದ ನಂತರ ಅಸೆಂಬ್ಲಿಯಲ್ಲಿಯೋ ಕೌನ್ಸಿಲಿ ನಲ್ಲಿಯೋ ತನ್ನ ತಂದೆಯ ಕೆಳಗೆ ಸೇನಾನಾಯಕನೋ ಮಂತ್ರಿಯೋ ಆಗಿ ನಿಂತು ಕೆಲಸ ಮಾಡುವುದು. ಕೊನೆಯದೆಂದು ಅವರು ಈ ಎರಡೂ ಮಾರ್ಗಗಳನ್ನು ತೊರೆದು ಯಾವ ರಗಳೆಗೂ ಹೋಗದೆ ತನ್ನ ಕೈಯಿಂದಾದಷ್ಟು ಇನ್ನಾವ ಕೆಲಸಗ ಳನ್ನಾದರೂ ಮಾಡುತ್ತ ಇದ್ದು ಕಾಲ ಬಂದಾಗ ಪುನಃ ಕುಸ್ತಿಯ ಕಣಕ್ಕೆ ನೆಗಳು ವುದು. ಈ ಮೂರು ಮಾರ್ಗಗಳಲ್ಲಿ ಜವಾಹರಲಾಲರಿಗೆ ಯಾವುದರಲ್ಲಿಯೂ ಸೊಗ ಸಿಲ್ಲ, ಸಡಗರವಿಲ್ಲ. ಒಂದು ಕಡೆ, ತನ್ನ ಪ್ರೇಮಕ್ಕೆ ಪಾತ್ರರಾದ ಗುರುವರ್ಯ ಗಾಂಧಿಗಳು ಸೆರೆಮನೆಯಿಂದಲೆ, ತನ್ನನ್ನು ರಾಜಗೋಪಾಲಾಚಾರ್ಯರಿಗೆ ಬೆಂಬಲ ಕೊಡು ಎನ್ನುವಂತೆ ಆಜ್ಞಾಪಿಸುತ್ತಿದ್ದರೆಂದು ಭಾಸವಾಗುತ್ತಿತ್ತು. ಇನ್ನೊಂದೆ ಡೆಗೆ ತನ್ನ ಮೆಚ್ಚಿನ ತಂದೆಯವರು ತನ್ನನ್ನು ಹಿಂಬಾಲಿಸು ಎಂದು ಮೌನವಾಗಿ ಹೇಳುವಂತೆ ಅನಿಸುತ್ತಿದ್ದಿತು. ಒಳಗಾದರೋ ನಾಡಿಗೋಸ್ಕರ ಯಾವ ತ್ಯಾಗವೂ ದೊಡ್ಡದಲ್ಲ; ಕೈಜೋಡಿಸಿಕೊಂಡಿರಬೇಡ; ಮಾತಿನಲ್ಲಿ ಮೈಮರೆದು, ಎಣಿಕೆ ಯಲ್ಲಿ ಹೊತ್ತುಗಳೆದು, ಧ್ಯೇಯಸಾಧನೆಯನ್ನು ಬಿಟ್ಟಿರಬೇಡವೆಂಬ ಕೂಗು ಕೇಳಿ ಸುತ್ತಿತ್ತು. ಹೀಗೆ ಮೂರು ಬಗೆಯ ಮುರಿಗೆಯಲ್ಲಿ ಸಿಕ್ಕು ಅವರು ಕಿಂಕರ್ತವ್ಯತಾ

ಮೂಢರಾಗಿ ಮುಂದುಗಾಣದೆ ನಿಂತರು. ಸ್ವತಂತ್ರವಿಚಾರಿಗಳು ಇಂಥ ಇಕ್ಕಟ್ಟಿನ ಇರುಕಿನಲ್ಲಿಯೂ ಕೂಡ ಹೆರವರ ಮಾತಿನಂತೆ ಸಹಸಾ ನಡೆಯುಹೋಗುವುದಿಲ್ಲ. ಜವಾಹರಲಾಲರೂ ಚನ್ನಾಗಿ ಯೋಚಿಸಿ ಸ್ಥಿತಿಗತಿಗಳನ್ನು ವಿಮರ್ಶಿಸಿ ಒಂದು ಹಾದಿಯನ್ನು ಹಿಡಿದರು. ಅದರಲ್ಲಿ ಅವರು ಎಳ್ಳಷ್ಟೂ ತಪ್ಪಲಿಲ್ಲೆಂಬುದು ಮುಂದಿನ ಪ್ರಸಂಗಗಳಲ್ಲಿ ತಾನೇ ಗೊತ್ತಾಯಿತು. ಜೀವನದಲ್ಲೊದಗಿದ ಈ ತೊಡಕನ್ನು ಅತ್ಯಂತ ಸುಂದರವಾಗಿ ಬಿಡಿಸಿಕೊಂಡರೆಂದೇ ಈಗ ಹೇಳಬೇಕಾಗುತ್ತದೆ. ಅವರು ಮಾಡಿದ ನಿರ್ಣಯುವೇನೋ ಅವರಿಗೇ ಉತ್ಸಾಹದಾಯಕವೂ ಉಲ್ಲಾಸಕಾರವೂ ಆಗಿರಲಿಲ್ಲ. ಏಕೆಂದರೆ ಸುಮ್ಮನಿರುವುದು ಈ ಜೀವರಾಜನ ಸ್ವಭಾವವೇ ಅಲ್ಲ. ರಕ್ತದ ಗುಣವೇ ಅಲ್ಲ. ಆದರೆ ಜವಾಹರಲಾಲರು ಬೆಳೆಯುವ ರೀತಿಯೇ ಬೇರೆ. ತನ್ನ ಈ ನಿಶ್ಚಯುವನ್ನು ಬಿಟ್ಟು ಬೇರೆ ಹಾದಿಯನ್ನು ಹಿಡಿದಿದ್ದರೆ ಈಗ ಎಲ್ಲವೂ ವಿಚಿತ್ರವಾಗುತ್ತಿತ್ತು. ಅವರು ಆಗ ಮಾಡಿದ್ದೇ ವಿಹಿತವಾಯಿತು. ತನ್ನ ಆಂತರಿಕ ತಳಮಳವಿಲ್ಲದ ಹೆರವರ ಅನುಕರಣಮಾಡಿದ್ದರೆ ಜವಾಹರಲಾಲರ ಬೆಳವಣಿಗೆಯು ಬಹಳ ಕುಂಠಿತವಾಗುತ್ತಿತ್ತು. ಮಹಾತ್ಮರ ಅಥವಾ ತನ್ನ ತಂದೆಯುವರ ಮಾರ್ಗಗಳಲ್ಲಿ ಯಾವುದರಿಂದಲೂ ಅವನ ಕಲ್ಯಾಣವು ಸಂಪೂರ್ಣವಾಗಿ ಆಗುವಂತಿರಲಿಲ್ಲ. ಅವರವರ ಕಾರ್ಯಕ್ಷೇತ್ರದಲ್ಲಿ ಅವರಿಬ್ಬರೂ ಪ್ರಚಂಡ ಪ್ರಭಾಕರರೇ ಆಗಿದ್ದರು. ಅವರ ಪ್ರಭೆಯಿಂದ ಅನುಯಾಯಿಗಳ ಕಣ್ಣು ಕುಕ್ಕುತ್ತಿದ್ದವು. ಅವರೆದುರು ಸ್ವವಿಚಾರಗಳನ್ನು ಮೂಲೆಗೆ ತಳ್ಳಿ ಹೇಳಿದಷ್ಟು ಕೇಳಿ ನಡೆಯುಬೇಕಿತ್ತಲ್ಲದೆ ಅವರನ್ನೇ ಬೆರಗುಗೊಳಿಸಿಬಿಡುವುದು ಅಸಾಧ್ಯವಾಗಿತ್ತು. ಇದಕ್ಕೆ ದೃಷ್ಟಾಂತ ಬೇಕಾದರೆ ರಾಜಗೋಪಾಲಾಚಾರ್ಯರು ದಾಸನೆಹರುಗಳ ಪಕ್ಷವನ್ನು ನೆಲಕ್ಕಂಟಿಸಿ ಮಹಾತ್ಮರ ಮೇಲುಗೈಯನ್ನು ತೋರಿಸಬೇಕೆಂದು ಎಷ್ಟು ಕಷ್ಟಪಟ್ಟರೂ ತಿಣಿಕಿದರೂ ಅವರಿಂದಾಗಲಿಲ್ಲ. ಅವರು ಮಹಾತ್ಮರ ನೆರಳಲ್ಲಿ ನಡೆಯುವ ಬಾಡಿದ ಒಂದು ಒಡ ಅನುಕರಣವೆಂದು ತಿಳಿಯಲ್ಪಟ್ಟರಲ್ಲದೆ, ಮಹಾತ್ಮರ ಶುದ್ಧ ಬುದ್ಧ ಪ್ರೇಮದ ಘನಮೂರ್ತಿಯೆಂದು ಮೆರೆಯಲಿಲ್ಲ. ಮಹಾತ್ಮರ ಮಹಾತ್ಮ್ಯವು ಅವರ ನುಡಿಗಳ ಹಿಂದಿನ ಪೀಠವಾಗಿರಲಿಲ್ಲ. ಶಬ್ದಗಳು ಗಾಂಧಿಯವರವೇ ಎಂದೆನಿಸಹತ್ತಿತು; ಆದರೆ ಸ್ವರಾಘಾತಗಳು ತೀರ ಭಿನ್ನವಾಗಿ ತೋರಿದವು. ಅವರಿಂದ ಅಸಹಕಾರ ಪಕ್ಷದವರನ್ನು ಹುರಿದುಂಬಿಸುವುದು ಆಗಲಿಲ್ಲ. ನಿರಾಶೆಯಿಂದ ಮುಂದುಗಾಣದವರಿಗೆ ದಾರಿದೋರಲೂ ಆಗಲಿಲ್ಲ.

ಜವಾಹರಲಾಲರಲ್ಲಿ ಇನ್ನೊಂದು ಕೊರತೆಯಿತ್ತು. ಮಹಾತ್ಮರು ಧಾರ್ಮಿಕ ಶ್ರದ್ಧೆಯುಳ್ಳವರಾಗಿದ್ದು ಯಾವಾಗಲೂ ಮನಸ್ಸಿನ ಸಮತೂಕವನ್ನು ಕಾಯ್ದು ಕೊಂಡು, ಸಾಮಾನ್ಯ ಗಲಾಟೆಗಳಿಂದ ಎಳ್ಳಷ್ಟೂ ಕದಲವೆ ಅಚಲರಾಗಿ ಉನ್ನತ ರಾಗಿ ನಿಲ್ಲುವರು. ಇತ್ತ ತಂದೆಯವರಾದರೋ ತಾರ್ಕಿಕ ತಲೆಯವರು. ತಂದೆ ಮಗನಿಗೆ ಇದರಲ್ಲಿ ಅಜಗಜಾಂತರ. ಮೋತಿಲಾಲರು ಒಂದು ಪಕ್ಷದ ಮಂಡನವನ್ನು ಹಿಡಿದರೆ ಸೈ, ಅದರಲ್ಲಿ ಮತ್ತೆ ಸೋಲು ತಿನ್ನುವುದೆಂದರೆ ಅವರಿಗೆ ಗೊತ್ತಿಲ್ಲ. ಅದಲ್ಲದೆ ಮೊದಲಿನಿಂದಲೂ ಮಂದಪಕ್ಷದ ಗಾಳಿಯಲ್ಲಿ ಮಿಂದು ಇದ್ದವರು. ಬ್ರಿಟಿಷರ ಮನಸ್ಸಿನ ಮೇಲೆಯೇ ನಮ್ಮ ಭಾರತದ ಭವಿತವ್ಯತೆಯು ಅವಲಂಬಿಸಿದೆ ಯೆಂದು ನಂಬಿರುವವರು. ಆದ್ದರಿಂದಲೇ ದಾಸರೊಡನೆ ಅಷ್ಟು ಬೇಗ ಕೂಡಿಕೊಂಡು ಸ್ವರಾಜ್ಯಪಕ್ಷವನ್ನು ಅವರು ಸ್ಥಾಪಿಸಿದ್ದು. ಈ ಬಗೆಯನ್ನು ಜವಾಹರಲಾಲರ ಇಡೀ ಹೃದಯವೇ ವಿರೋಧಿಸುತ್ತಿತ್ತು.

ಖಿಲಾಫತ ಚಳವಳದ ಮೂಲ ಕಾರಣಗಳ ಬುಡಮೇಲಾದ್ದರಿಂದ ಅವರ ರಭಸವು ಇಳಿತರಕ್ಕೆ ಬಂದಿತ್ತು. ೧೯೨೧ ರಲ್ಲಾದ ಜನಪರಿಗಣನೆಯ ಮೇರೆಗೆ (Census) ಸಿಕ್ಕ ಅಂಕೆಗಳನ್ನು ನೋಡಿ ಕೆಲವು ಹಿಂದೂ ಮುಂದಾಳುಗಳ ಮನಸ್ಸು ಹಿಂದೂಸಂಘಟನ ಹಿಂದೂಮಹಾಸಭೆ ಮುಂತಾದವುಗಳ ಕಡೆಗೆ ಹೊರಳಿತು. ಇಂಥ ವಿಚಿತ್ರ ಸಮಯದಲ್ಲಿ ನಮ್ಮ ತರುಣ ನಾಯಕರು ಒಮ್ಮೆಲೇ ಯಾವುದಾದರೊಂದು ನಿರ್ಣಯವನ್ನು ಮಾಡಿ ಮುಂದಕ್ಕೆ ಜಿಗಿದರೆ ನಂತರ ಸಂತಾಪವಾಗಬಹುದಾಗಿತ್ತು. ಅವರು ನಿಜವಾಗಿ ಜಾಣರಾದ್ದರಿಂದ ಮನಸ್ಸಿನ ಈ ಹೊಯ್ದಾಟದಲ್ಲಿಯೇ ಇದ್ದು ವಸ್ತುಸ್ಥಿತಿಯನ್ನು ಚೆನ್ನಾಗಿ ಪರಿಶೀಲಿಸಿದರು. ಕೊನೆಗೆ ಬೇಸತ್ತು ಕಾರ್ಯಕ್ರಮದ ಜಂಜಾಲದ ಲೋಕಾಂತಕ್ಕಿಂತ ತನ್ನ ಊರ ಗೆಲಸವನ್ನು ಮಾಡುವ ಏಕಾಂತವೇ ಮೇಲೆಂದು ನಿಶ್ಚಯಮಾಡಿದರು. ಪ್ರಯಾಗ ನಗರದ ಆಡಳಿತೆಯಲ್ಲಿ ತಲೆಯನ್ನು ಹಾಕಿ ಅದರ ಕಲ್ಯಾಣಕೀರ್ತಿಗಳಿಗಾಗಿ ಕಷ್ಟಪಟ್ಟರು.

ಮಹಾತ್ಮರ ಮನೆತನದ ಜನರನ್ನುಳಿದು ಅವರೊಡನೆ ಜವಾಹರಲಾಲರಿಗಿಂತ ಹೆಚ್ಚು ಅಚ್ಚುಮೆಚ್ಚಿನ ನಿಕಟಸಂಬಂಧಗಳನ್ನಿಟ್ಟವರು ಇನ್ನೊಬ್ಬರಿಲ್ಲ. ಗಾಂಧಿ ಜವಾಹರಲಾಲರಲ್ಲಿ ಅಷ್ಟು ನಿರ್ಮಲವಾದ ನೆಚ್ಚಿನ ಹೃದಯ ಸಂಬಂಧಗಳು ಬೆಳೆದಿವೆ.

ಆದರೆ ಅದರಲ್ಲಿಯೂ ಒಂದು ತಮಾಷೆ. ಗಾಂಧಿಯವರು ತಮ್ಮ ಅಸಾಮಾನ್ಯ ತಪಶ್ಚರ್ಯೆಯಿಂದಲೂ ಸಂಕಲ್ಪಬಲದಿಂದಲೂ ಒಲವಿನಿಂದಲೂ ಅನೇಕರನ್ನು ತಾವು ಕಂಡುಂಡ ತತ್ತ್ವಗಳ ಆಚರಣಮಾರ್ಗಕ್ಕೆ ಹಚ್ಚಿದರು. ಇಂದು ಪ್ರಪಂಚ ದಲ್ಲಿ ಎಲ್ಲರಿಗಿಂತಲೂ ಹೆಚ್ಚಿನ ಅನುಯಾಯಿಗಳು ಯಾರಿಗಾದರೂ ಇದ್ದರೆ ಅದು ಮಹಾತ್ಮರಿಗಲ್ಲದೆ ಇನ್ನಾರಿಗೆ ? ಅವರಲ್ಲಿ ದೇವಭಾವವನ್ನಿಟ್ಟು ಪೂಜಿಸುವವರೂ ಸತ್ಪುರುಷರೆಂದು ನಿರ್ಮಲಭಾವದಿಂದ ನೋಡುವವರೂ ಲೆಕ್ಕವಿಲ್ಲದಷ್ಟು ಜನ. ವಿಶ್ವಬಂಧುವಾಗಿಯೂ ಪತಿತೋದ್ಧಾರಕನಾಗಿಯೂ ಜನಮನವನ್ನು ಆಕರ್ಷಿ ಸುವವನು ಆತನೇ ಅಲ್ಲವೇ ? ನಾಡಿನ ನಾಯಕನಾಗಿ ನಾಡಗುಡಿಯನ್ನೆತ್ತಿ ಹಿಡಿದು ಭಾರತಸ್ವಾತಂತ್ರ್ಯ ಸಮರವನ್ನು ಹೂಡಿದ ಜಗದ್ವಿಖ್ಯಾತ ವಿಭೂತಿಯೂ ಆತನೇ ಅಲ್ಲವೇ ? ಇಂಥ ಅಗಾಧ ಶಕ್ತಿಯುತನದಿಂದ ಜವಾಹರಲಾಲರಂಥವರನ್ನು ತನ್ನ ತತ್ತ್ವಾನುಯಾಯಿಗಳಲ್ಲಿ ಸೇರಿಸಿಕೊಳ್ಳುವುದೇನೂ ಅಚ್ಚರಿಯ ಮಾತಾಗಿರ ಲಿಲ್ಲ. ಆದರೂ ಜವಾಹರಲಾಲರು ಇನ್ನೂ ಸ್ವತಂತ್ರ ಶ್ರದ್ಧೆಯ ತರುಣರೇ ಆಗಿ ರುವರು. ಜವಾಹರಲಾಲ ಮತ್ತು ಗಾಂಧಿಗಳ ವಿಚಾರಗಳಲ್ಲಿ ಇಂದು ಸಂಪೂರ್ಣ ಸಾಮ್ಯವಿಲ್ಲ. ಏಕರೂಪತೆಯೂ ಇಲ್ಲ.

ಮಹಾತ್ಮರು ರಶಿಯಾದಲ್ಲಿ ನಡೆದಿರುವ ಕಮ್ಯೂನಿಸ್ಟಿಕ್ ಚಳವಳವನ್ನು ಕಠಿಣವಾಗಿ ವಿರೋಧಿಸುತ್ತಾರೆ. ಆದರೆ ಜವಾಹರಲಾಲರು ಆ ಚಳವಳದ ಸೌಮ್ಯಸ್ವರೂಪವಾದ ಸಮಾಜಸತ್ತಾವಾದ (Socialism)ವನ್ನು ತನುಮನ ಧನಗಳಿಂದ ಎತ್ತಿಹಿಡಿದು ಪುರಸ್ಕರಿಸುತ್ತಿದ್ದಾರೆ. ಈ ತಾತ್ತ್ವಿಕ ವಿರೋಧಗಳ ಬೇರುಗಳು ಒಳಗೆ ಬಹಳ ಆಳವಾಗಿವೆ. ಗಾಂಧಿಯವರು ತಮ್ಮ ಭೇದಗಳಿಗೆಲ್ಲ ಧರ್ಮವೇ ಆಧಾರವಾಗಿದೆಯೆನ್ನುತ್ತಾರೆ. ಪಂಡಿತರು "ಧರ್ಮದಿಂದಲೇ ಇಷ್ಟೆಲ್ಲ ತೊಳಲಾಟಕ್ಕೆ ಕಾರಣ. ದೇವರ ಹೆಸರಿನಿಂದಲೇ ರಕ್ತರಂಬಾಳ. ಎಲ್ಲಿಯ ದೇವರು ಎಲ್ಲಿಯ ಧರ್ಮ"ವೆನ್ನುವ ಒಂದು ಬಗೆಯ ನಾಸ್ತಿಕವಾದದವರು. ಇವರಿಬ್ಬರಲ್ಲಿ ತೋರುವ ಭೇದಗಳಿಗೆ ಧರ್ಮವೇ ಮೂಲ. ಒಬ್ಬರು ಧರ್ಮಕ್ಕೆ ದೃಢಾಲಿಂಗನವನ್ನು ಕೊಟ್ಟವರು, ಇನ್ನೊಬ್ಬರು ಅದರ ವಿರೋಧಿಗಳು, ಒಂದು ಬಗೆಯ ನಾಸ್ತಿಕರು. ಧರ್ಮವನ್ನು ದಬ್ಬಿಹಾಕಿದರೆ ಹಿಂದೂ ಮುಸಲ್ಮಾನ ಮುಂತಾದ ಸಮಾಜಗಳ ಘಟನೆಯು ಅಲುಗಾಡುವದು. ಸಂಪತ್‌ಸಾಮ್ರಾಜ್ಯದ

(Capitalism) ಸೊಕ್ಕನಡಗಿಸಿದರೆ ಇಂದು ಒಬ್ಬನ ಮೇಲೆ ಇನ್ನೊಬ್ಬನು ನಡೆಸುವ ದರ್ಪದೌಲತ್ತುಗಳು ಕಿತ್ತುಬೀಳುವವು, ಬಂದು ಜವಾಹರಲಾಲರ ಸಿದ್ಧಾಂತವಾತು. ಮಹಾತ್ಮಾ ಮತ್ತು ಮೋತಿಲಾಲರ ಧಾರ್ಮಿಕ ವಿಶ್ವಾಸಗಳಲ್ಲಿ ಎಷ್ಟೋ ಭೇದಗಳಿವೆ. ಆದರೆ ತಂದೆಗಿಂತ ಮಗನು ಬಹಳ ವಿರೋಧಿಯು. ಅವನು ಒಂದು ಬಗೆಯ ನಾಸ್ತಿಕನೂ ಬೌದ್ಧನೂ ಎಂದು ಹೇಳಬಹುದು. ದೇವ ಮತ್ತು ಧರ್ಮಗಳ ಬಗ್ಗೆ ಮಹಾತ್ಮರಿಗೂ ಜವಾಹರಲಾಲರಿಗೂ ಭಯಂಕರ ಮತಭೇದವಿದ್ದರೂ ಅವರು ಪ್ರಾಮಾಣಿಕರಾಗಿದ್ದಾರೆ. ಒಂದು ಗುಣವು ಇಬ್ಬರಲ್ಲಿಯೂ ಸಾಮಾನ್ಯ. ಮಹಾತ್ಮರಷ್ಟೇ ಜವಾಹರಲಾಲರೂ ಸ್ಪಷ್ಟವಾದಿಗಳು. ತಮ್ಮ ಸ್ಪಷ್ಟ ಭಾಷಣದಿಂದ ಲೋಕವಿರೋಧವೇ ಉಡಿಯಲ್ಲಿ ಬಿದ್ದರೂ ಅವರು ಲೆಕ್ಕಿಸರು. ಮೋತಿಲಾಲರು ಚಾಣಾಕ್ಷರು. ರಾಜಕಾರಣದ ಕೌಟಿಲ್ಯವನ್ನು ಕಂಡು ಅದರಲ್ಲಿ ಸಮಯ ಸಿಕ್ಕಂತೆ ಸಾಗುವವರು. ತಮಗೂ ಇನ್ನೊಬ್ಬರಿಗೂ ಒಂದು ವಿಶಿಷ್ಟವಾದ ಸಂಗತಿಯಲ್ಲಿ ನ್ಯಾಯವಾಗಿ ಅಂತಃಕರಣಪೂರ್ವಕವಾಗಿ ಮತಭೇದವಿದ್ದರೂ ತಮಗೆ ಅದನ್ನು ಹೇಳದಿರುವುದರಿಂದ ಕಾರ್ಯ ಕೈಗೂಡುತ್ತಿದ್ದರೆ ಅವರು ಅದನ್ನು ಮನಸ್ಸಿನಲ್ಲಿಯೇ ಮುಚ್ಚಿಡುವರು; ಬಿಚ್ಚಿಹೇಳಲಿಕ್ಕೇ ಇಲ್ಲ. ಹೊರಗೆ ಹೊರಗೆ ಚಾಣಕ್ಯನ ಚಿಟಕೆಗಳನ್ನು ಹೊಡೆಯುತ್ತ ಒಳಗಿಂದೊಳಗೇ ಕಾರ್ಯಸಾಧನೆಯ ಹಂಚಿಕೆಗಳನ್ನು ಹೂಡುವರು. ಅವರ ಭಾಷಣ ಮತ್ತು ಬರೆಹಗಳನ್ನು ಬಿಡದೆ ಓದಿರಿ. ಅವುಗಳಲ್ಲಿ ಎಲ್ಲಿಯಾದರೂ ಒಂದು ಕಡೆಗೆ ತಮಗೆ ತೀವ್ರವಾಗಿ ಕಳಕಳಿಯಿಂದ ಅನಿಸುವ ಒಂದು ನಿಚ್ಚಳದ ನಂಬಿಗೆಯ ಮತವನ್ನು ಕಂಡುಬರುವುದೇ ? ಈ ಎರಡು ದಂಡೆಯ ಮೇಲೆ ಕೈಯಿಟ್ಟು ಮಾತನಾಡುವ ಸ್ವಭಾವವೇ ಅವರ ದರ್ಪಕ್ಕೂ ದೌರ್ಬಲ್ಯಕ್ಕೂ ಕಾರಣ. ಅವರಿಗೆ ಶಿಷ್ಯಸಂದೋಹವು ಸಿಕ್ಕಲಿಕ್ಕಿಲ್ಲ. ಆದರೆ ಉದ್ದೇಶವು ನೆರವೇರುವುದು. ಸ್ವರಾಜ್ಯವು ಅವರ ಹೃದಯದ ಗುಟ್ಟು. ಅದಕ್ಕೋಸ್ಕರ ಅವರು ದುಡಿಯುವುದು. ಮತ್ತು ಅದಕ್ಕಾಗಿಯೇ ಮಡಿಯುವುದು. ಇಷ್ಟೊಂದು ಸಿಧ್ಧಾಂತವಾತು. " ನನ್ನ ತಾತ್ತ್ವಿಕ ವಿಶ್ವಾಸ ಮತ್ತು ಧರ್ಮಶ್ರದ್ಧೆಯ ಮಾತುಗಳನ್ನು (Declaration of beliefs) ತೂಕಮಾಡುತ್ತ ಕೂಡಬೇಡಿರಿ. ನನಗೆ ಅನುವಾಗಿ ಬೆಂಬಲಕ್ಕೆ ನಿಂತು ಮುಂದಕ್ಕೆ ಸಾಗುವುದೇ ನಿಮ್ಮ ಕರ್ತವ್ಯ" ವೆಂದು ಅವರು ಎಷ್ಟೋ ಸಲ

ಹೇಳುವರು. ಆದ್ದರಿಂದಲೇ ಚರಿತ್ರೆಗೆ ಲಖನೌ ಪರಿಷತ್ತಿನಲ್ಲಿ ಇಡೀ ಭಾರತವೇ ಅವರ ನೇತೃತ್ವದಲ್ಲಿ ಒಗ್ಗಟ್ಟಾಗಿ ನಿಂತದ್ದು ನೋಡಲಿಕ್ಕೆ ಸಿಕ್ಕಿತು.

ಜವಾಹರಲಾಲರು ಈ ತರಹದ ಜನರೇ ಅಲ್ಲ. ಅವರಿಗಿದೆಲ್ಲ ಜಂಜಾಲವು ಗೊತ್ತಿಲ್ಲ. ಅವರು ಸರಳಸ್ವಭಾವಿಗಳು. ಅವರ ಮಾತು, ಒಂದು ಪೆಟ್ಟು ಎರಡು ತುಂಡು. ಸರಳತನದಲ್ಲಿಯೇ ಅವರ ಗೆಲುವಿದೆ, ಗೌರವವಿದೆ. ಅದರಿಂದಲೇ ಅವರ ಶತ್ರುಮಿತ್ರರೂ ಹುಟ್ಟುವರು. ಅವರ ಬಗ್ಗೆ ಜನರಲ್ಲಿ ಅನುರೋಧ ವಿರೋಧ ಗಳು ಒಂದೇ ಜೋರಿನಿಂದೇಳುತ್ತವೆ.

ತಂದೆಮಕ್ಕಳಲ್ಲಿದ್ದ ಈ ಮತಭೇದಗಳು ರಾಷ್ಟ್ರನಿರ್ಮಾಣಕಾರ್ಯದಲ್ಲಿ ಒಂದಕ್ಕೊಂದು ವಿರೋಧಿಯಾಗಿ ವರ್ತಿಸಲಿಲ್ಲ. ಮಾರಕವಾಗಿ ಪರಿಣಮಿಸಲಿಲ್ಲ. ಪೂರಕವಾದವು. ತಂದೆ, ಮಗ, ಮತ್ತು ಮಹಾತ್ಮಾ ಈ ತ್ರಿಮೂರ್ತಿಗಳು ಸ್ವಾರ್ಥವನ್ನು ಸುಟ್ಟು ದೇಶಕ್ಕೋಸ್ಕರ ದೇಹವನ್ನು ದಂಡಿಸುವವರಾದ್ದರಿಂದ ಪರಸ್ಪರರಲ್ಲಿ ಪ್ರೇಮವಿಟ್ಟು ತಮ್ಮ ಶಕ್ತಿಗಳನ್ನು ಹೊಸೆದು ಹುರಿಮಾಡಿ ರಾಷ್ಟ್ರ ರಥವನ್ನು ವೇಗದಿಂದ ಎಳೆಯುವುದರಲ್ಲಿಯೇ ವಿನಿಯೋಗಿಸಿದರು.

---

## ಪ್ರಯಾಗ ನಗರಾಧಿಪತ್ಯ

ಅಸಹಕಾರಯೋಗದ ಸ್ವೀಕಾರಮಾಡಿದ ಬಳಿಕ ಜವಾಹರಲಾಲರು ಹೇಗೆ ರಾಷ್ಟ್ರಸೇವೆಯನ್ನು ಗೈದರು ಮತ್ತು ಅದರಲ್ಲಿ ಅವರಿಗೆ ಯಾವ ಫಲಪ್ರಾಪ್ತಿ ಯಾಯಿತೆಂಬುದನ್ನು ಹಿಂದೆಯೇ ಉಲ್ಲೇಖಿಸಿದೆ. ಸರ್ವ ಸಂಯುಕ್ತ ಪ್ರಾಂತದಲ್ಲಿ ಅದ್ಭುತವಾದ ಸಂಘಟನಕಾರ್ಯವನ್ನು ಅವರು ಮಾಡಿದರು. ಹಳ್ಳಿಪಳ್ಳಿಗಳ ಮನೆ ಮನೆಗೂ ಮುಟ್ಟುವಂತೆ ದೇಶಸಂದೇಶವನ್ನು ಬಿತ್ತರಿಸಿದರು. ಅದರಿಂದ ಅವರ ಬಗ್ಗೆ ಜನರಲ್ಲಿ ವಿಶೇಷ ವಿಶ್ವಾಸವುಂಟಾಯಿತು. ಮೊದಲಿನಿಂದಲೂ ಇವರಿಗೆ ಕೌನ್ಸಿಲ ಕಾರ್ಯದಲ್ಲಿ ಒಲವಿರಲಿಲ್ಲ. ಸ್ವರಾಜ್ಯಪಕ್ಷದವರ ಸೆಳವಿಗೆ ಅವರು ಸಿಕ್ಕ ಲಿಲ್ಲ. ಆದ್ದರಿಂದ ಅವರು ಚುನಾವಣೆಗೆ ಉಮೇದವಾರರಾಗಿ ನಿಲ್ಲಲಿಲ್ಲ. ಆದರೆ ಕೊಂಗ್ರೆಸ್ಸಿನವರು ಸ್ಥಾನಿಕ ಸ್ವರಾಜ್ಯಕ್ಕೆ ಸಂಬಂಧಪಟ್ಟ ಸಂಸ್ಥೆಗಳನ್ನು ಬಹಿಷ್ಕ

ರಿಸದೇ ಇದ್ದುದರಿಂದಲೂ ಮತ್ತು ಮಹಾತ್ಮರು ಅವುಗಳಲ್ಲಿ ಸೇರಿ ಕೆಲಸಮಾಡ ಬೇಕೆಂಬ ಅಪ್ಪಣೆಯನ್ನು ಮಾಡಿದ್ದುದರಿಂದಲೂ ಜವಾಹರಲಾಲರು ೧೯೨೨ರಲ್ಲಿ ಪ್ರಯಾಗ ನಗರದ ಮುನಸೀಪಾಲ್ಟಿಗು ಚುನಾವಣೆಗೆ ನಿಂತರು. ಅದರಲ್ಲಿ ಜಯಶೀಲರಾದರು, ನಗರಾಧಿಪತಿಗಳೂ ಆದರು. ೧೯೨೫ರ ವರೆಗೆ ಪ್ರಯಾಗ ನಗರಾಧಿಪತ್ಯದಲ್ಲಿ ಸತತ ಶ್ರಮಮಾಡಿ ಒಳ್ಳೇಕಾರ್ಯವನ್ನು ಮಾಡಿ ತೋರಿಸಿ ದರು. ಅಧ್ಯಕ್ಷರಾಗುವದೊಂದೇ ತಡ, ತಮ್ಮಿಂದ ನಗರಾಧಿಪತ್ಯದಲ್ಲಿ ಯಾವ ಎಲ್ಲ ಸುಧಾರಣೆಗಳನ್ನು ಮಾಡುವದು ಸಾಧ್ಯವೋ ಅವುಗಳನ್ನು ಕೈಕೊಂಡರು. ಸ್ಥಾನಿಕ ಸಂಸ್ಥೆಗಳಿಂದ ಆಗುವ ಕಾರ್ಯಗಳಿಗೆ ಒಂದು ಮೇರೆಯಿದೆ ಎಂಬು ದೇನೂ ಸುಳ್ಳಲ್ಲ. ಆದರೆ ಕರ್ತೃತ್ವಶಾಲಿಗಳೂ ಕಾರ್ಯನಿಪುಣರೂ ಆದವರಿಗೆ ಇಂಥ ಮರ್ಯಾದಿತ ಕ್ಷೇತ್ರಗಳಲ್ಲಿಯೂ ಎಷ್ಟೋ ಕಲ್ಯಾಣಕರವಾದ ಕೆಲಸ ಗಳನ್ನು ಮಾಡಲಿಕ್ಕೆ ಬರುತ್ತದೆ. ಇಂಥ ಇಕ್ಕಟ್ಟಿನಲ್ಲಿಯೂ ಎಷ್ಟೋ ಉಪ ಯುಕ್ತ ಕೆಲಸಗಳನ್ನು ಮಾಡುವುದು ಸಾಧ್ಯವಿದೆ ಎಂಬುದಕ್ಕೆ ನಮ್ಮ ತರುಣ ನಾಯಕರೇ ಸಮೀಚೀನವಾದ ಉದಾಹರಣೆ. ಜವಾಹರಲಾಲರು ಒಳಗೆ ಸೇರಿದ ನಂತರ ಅರಾಜಕತೆಯು ಪ್ರವೇಶವಾಯಿತೆಂದು ಹೊಯ್‌ಕೊಳ್ಳುವ ಬಿಳಿಬಣ್ಣದ ಅಧಿಕಾರಿಗಳು ಸಹ ಅವರ ಕಾರ್ಯಕ್ಷಮತೆಯನ್ನು ನೋಡಿ ತಲೆತಗ್ಗಿಸಬೇಕಾ ಯಿತು. ಯೋಗ್ಯ ವ್ಯಕ್ತಿಗಳು ತಕ್ಕ ಸ್ಥಾನಕ್ಕೇರಿದರೆ ಅದೆಂಥ ಪ್ರಚಂಡ ಚಮತ್ಕಾರ ವಾದೀತೆಂಬುದನ್ನು ಆ ಸಮಯದಲ್ಲಿ ಕಲ್ಕತ್ತೆಯ ಮೇಅರ್ ದೇಶಬಂಧು ಚಿತ್ತರಂಜನದಾಸ, ಅಹಮ್ಮದಾಬಾದಿನ ನಗರಾಧಿಪತಿಗಳಾದ ಸರದಾರ ವಲ್ಲಭ ಭಾಯಿ ಪಟೇಲ, ಮುಂಬಯಿಯ ಮೇಯರರಾದ ವಿಠ್ಠಲಭಾಯಿ ಪಟೇಲ, ಮತ್ತು ಪ್ರಯಾಗಾಧಿಪತಿಯಾದ ಜವಾಹರಲಾಲ ಇವರು ಚನ್ನಾಗಿ ಮುಂದಟ್ಟಾ ಗುವಂತೆ ಮಾಡಿ ತೋರಿಸಿದರು. ಪ್ರಯಾಗ ನಗರಾಧಿಪತ್ಯದಲ್ಲಿ ಜವಾಹರಲಾಲರು ಈ ಕೆಳಗಿನ ಕೆಲಸಗಳನ್ನು ನೆರವೇರಿಸಿದರು :—

೧ ಎಲ್ಲ ಶಾಲೆಗಳಲ್ಲಿ ನೂಲುವದು ೨ ಸ್ಕೌಟಿಂಗ ೩ ಇಂಗ್ಲಿಷ್‌ಭಾಷೆಯ ಬದಲಾಗಿ ಹಿಂದೀ ಭಾಷೆಯ ಪ್ರಾರಂಭ ೪ ಹಬ್ಬಗಳ ಪಟ್ಟಿಗೆ ಗಾಂಧೀ ಮತ್ತು ಟಿಳಕ ದಿನಗಳನ್ನು ಸೇರಿಸಿದ್ದು ೫ ಸಾಮ್ರಾಜ್ಯ ದಿನವನ್ನು ಹಬ್ಬಗಳ ಪಟ್ಟಿಯಿಂದ ಕಾಟುಹೊಡೆದದ್ದು. ೬ ಮ. ಗಾಂಧಿಯವರಿಗೆ ಮಾನಪತ್ರ. ೭ ಗಾಂಧಿಯವರು ಸೆರೆಮನೆಯಿಂದ ಹೊರಸಾರಿದ ಕೂಡಲೆ ಉಲ್ಲಾಸದ ಉತ್ಸವಾದಿಗಳು ೮ ವೈಸ

ರಾಯರ ಸ್ವಾಗತಕ್ಕೆ ಬಹಿಷ್ಕಾರ ೯ ರಾಜಕೀಯ ಸಭೆಗಳು ಮತ್ತು ಮೆರವಣಿಗೆಗಳಲ್ಲಿ ಭಾಗ ತೆಗೆದುಕೊಳ್ಳಲು ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯ.

ಅವರು ಮುನಸೀಪಾಲಟಿಯ ಅಂತರ್ಗತ ಆಡಳಿತ ಕ್ರಮದಲ್ಲಿಯೂ ಅನೇಕ ಸುಧಾರಣೆಗಳನ್ನು ಮಾಡಿದರು. ಊರವರ ನೀರಿನ ಕೊರತೆಗಳನ್ನು ಕಡಿಮೆ ಮಾಡುವದು, ಆರೋಗ್ಯ ಶಿಕ್ಷಣ, ಮಾರ್ಗನಿರ್ಮಾಣ ಮುಂತಾದ ಕೆಲಸಗಳಲ್ಲಿ ಬಹಳ ಮನಸ್ಸು ಹಾಕಿ ಉತ್ಕೃಷ್ಟವಾದ ಯಶಸ್ಸನ್ನು ದೊರಕಿಸಿದರು. ಮುಖ್ಯತಃ ಬಡಬಗ್ಗರು ಸುಖವಾಗಿರುವಂತೆ ಅನೇಕ ಏರ್ಪಾಡುಗಳನ್ನು ಮಾಡಿದರು. ಬಿಳಿಬಣ್ಣದ ಅಧಿಕಾರಿಗಳು ಅಸಹಕಾರಿಗಳು ಕೇವಲ ವಿನಾಶಕ ಕಾರ್ಯವನ್ನು ಕೈಕೊಂಡಿದ್ದಾರೆ. ಅವರಿಗೆ ವಿಧಾಯಕ ಕೆಲಸಗಳನ್ನು ಮಾಡಲು ಗೊತ್ತೇ ಇಲ್ಲ ಎಂದು ಆಗಾಗ್ಗೆ ಹರಟುತ್ತಿದ್ದರು. ಆದರೆ ಪಟೇಲ, ದಾಸ, ಜವಾಹರಲಾಲರಂಥವರು ಅದ್ಭುತ ಕಾರ್ಯವನ್ನು ಮಾಡಿ ತೋರಿಸಿ, ಮೇಲಿನ ವಾಕ್ಯಗಳಿಗೆ ಅರಿದಾಳವನ್ನು ಹಚ್ಚಿಸುವಂತೆ ಮಾಡಿದರು. ಆಗಿನ ಕಾಲಕ್ಕೆ ಪ್ರಯಾಗದ ಮುನಸಿಪಾಲಟಿಯ ಮೇಲ್ವಿಚಾರಣೆಯನ್ನು ಮಾಡಿ, ಕಮಿಶನ್ನರಾದ ಮಿ. ಸ್ಟಾವೆಲ್, ಅಲೆಕ್ಝಾಂಡರ್, ಸ್ಮಿಥ್ ಪ್ರಭೃತಿಗಳು ತಾವು ಬರೆದ ವರದಿಯಲ್ಲಿ ಜವಾಹರಲಾಲರ ನಗರಾಧಿಪತ್ಯದ ಆಡಳಿತೆಯನ್ನು ಚೆನ್ನಾಗಿ ಹೊಗಳಿರುವರು. ನಗರಕಚೇರಿಯ ಸಾಂಪತ್ತಿಕಸ್ಥಿತಿಯನ್ನು ಸುಧಾರಿಸಿ ಉಪಯುಕ್ತವಾದ ಯೋಗ್ಯರೀತಿಯಲ್ಲಿ ವೆಚ್ಚಗಳನ್ನೂ ಮಾಡಿದರು. ಇವೆಲ್ಲ ಕೆಲಸಗಳಲ್ಲಿ ಅವರು ದೇಶಹಿತವನ್ನು ಮರೆಯಲೇ ಇಲ್ಲ. ನಗರಮಂಡಲದ ಸಭಾಸದರೂ ಅವರಿಗೆ ತುಂಬಾ ನೆರವನ್ನು ಕೊಟ್ಟರು. ಒಕ್ಕಟ್ಟಿನಿಂದ ನಡೆದರು. ಅಂತೂ ಜವಾಹರಲಾಲರ ನಾಯಕತ್ವದಲ್ಲಿ ನಗರಮಂಡಲದವರು ಜನಮನತೋಷಕವಾದ ಅನೇಕ ಕೆಲಸಗಳನ್ನು ಮಾಡಿದರು. ಪ್ರಯಾಗದ ಪ್ರಜೆಗಳು ಅವರ ಬಗ್ಗೆ ಎಷ್ಟು ಕೃತಜ್ಞರಾಗಿದ್ದರೂ ಕಡಿಮೆಯೇ ಸರಿ. ಮುಂದೆ ಜವಾಹರಲಾಲರು ೧೯೨೫ರಲ್ಲಿ ತಮ್ಮ ಅಧ್ಯಕ್ಷಪದಕ್ಕೆ ರಾಜೀನಾಮೆಯನ್ನು ಕೊಟ್ಟರು. ಕಮಿಶನ್ನರಾದ ಮಿ. ಸ್ಮಿಥರು ಅತ್ಯಂತ ಖೇದಪ್ರದರ್ಶನವನ್ನು ಮಾಡಿ ಅವರ ಕಾರ್ಯನಿಷ್ಠೆಯ ಶ್ಲಾಘನೆಯನ್ನು ಮಾಡಿದರು.

ಸ್ವರಾಜ್ಯಪಕ್ಷವು ಸ್ಥಾಪಿತವಾದಂದಿನಿಂದ ಅವರ ಮನವು ದ್ವಿಮುಖವಾಯಿತು. ಒಂದು ಕಡೆ ತಂದೆಯವರು, ಇನ್ನೊಂದು ಕಡೆ ತತ್ತ್ವನಿಷ್ಠೆ. ಇದರಲ್ಲಿ

ತತ್ತ್ವನಿಷ್ಠೆಗೇ ಜಯವು ದೊರಕಿತೆಂಬುದು ನಿಜವಾದರೂ ಅವರಿಗೆ ಅದರಿಂದ ಕೆಲವು ಕಾಲ ಸುಮ್ಮನಿರಬೇಕಾಯಿತು. ಇದೇ ಸಮಯಕ್ಕೆ ಅವರು ಯುರೋಪಕ್ಕೆ ತೆರಳಬೇಕಾಯಿತು. ಅವರ ಸೌಭಾಗ್ಯವತಿ ಕಮಲಾ ನೆಹರುಗಳು ಜ್ವರ ಹಿಡಿದು ನರಳುತ್ತಿದ್ದರು. ಅವರ ಶರೀರಸ್ಥಿತಿಯು ಕ್ಷಯಕ್ಕೊಳಗಾದೀತೆಂದು ಸಂಶಯ ಬಂದಿತು. ಆದ್ದರಿಂದ ೧೯೨೬ರಲ್ಲಿ ಹೆಂಡತಿಯನ್ನು ಕರೆದುಕೊಂಡು ಅವರು ಸ್ವಿಜರ್ಲಂಡಿಗೆ ಹೊರಟುಹೋದರು.

---

## ಯುರೋಪದ ಪ್ರವಾಸ

ಸ್ವಿಜರ್ಲಂಡದಲ್ಲಿ ಅವರ ಮಡದಿಗೆ ಯೋಗ್ಯ ಪರಾಮರಿಕೆಗಳಾದನಂತರ ಅವರಿಗೆ ಸ್ವಲ್ಪ ಗುಣವಾಯಿತು. ಆದ್ದರಿಂದ ಅವರು ಯುರೋಪಖಂಡದಲ್ಲೆಲ್ಲ ಸಂಚಾರ ಬೆಳೆಸಿದರು. ಅಲ್ಲಿ ಭಾರತದೇಶದ ಪರವಾಗಿ ಅತ್ಯಂತ ಮಹತ್ವದ ಕೆಲಸಗಳನ್ನು ಮಾಡಿದರು. ಗೌಹತ್ತೀ ಕೊಂಗ್ರೆಸಿನವರು ಜವಾಹರಲಾಲರನ್ನು ಬ್ರುಸೆಲ್ಸ ಪಟ್ಟಣದಲ್ಲಿ ಸೇರುವ ಸಾಮ್ರಾಜ್ಯವಿರೋಧಿ ಸಂಘಕ್ಕೆ ತಮ್ಮ ಪ್ರತಿನಿಧಿಗಳಾಗಿ ನೇಮಿಸಿದರು. ಬ್ರುಸೆಲ್ಸ ಕೊಂಗ್ರೆಸಿನವರು ಅವರ ಯೋಗ್ಯತೆಗೆ ತಕ್ಕ ಸನ್ಮಾನಗಳನ್ನು ಕೊಟ್ಟು ಅವರನ್ನು ವಿಷಯನಿಯಾಮಕ ಮಂಡಲದ ಸಭಾಸದರನ್ನಾಗಿ ಆರಿಸಿದರು. ಮತ್ತು ಒಮ್ಮೆ ಅಧ್ಯಕ್ಷರಾಗಿ ಕೂಡ ಆರಿಸಿದ್ದರು. ಮುಂದೆ ಸಂಘದವರು ಐದು ಮಾನ್ಯ ಅಧ್ಯಕ್ಷರನ್ನು ಆರಿಸುವಾಗಲೂ ಇವರನ್ನು ಮರೆಯಲಿಲ್ಲ. ಇವರ ಇತರ ಸಹಕಾರಿಗಳೆಂದರೆ ಇಸ್ಟನ್, ರೋಮೆನ್ ರೋಲಂಡ್, ಮ್ಯಾಡಾಮ್ ಸನ್ಯತ್ಸೇನ್ ಮತ್ತು ಜಾರ್ಜ ಲೆನ್ಸಬರಿಗಳು. ಇದಲ್ಲದೆ ಸಾಮ್ರಾಜ್ಯವಿರೋಧಿ ಸಂಘದ ಕಾರ್ಯನಿರ್ವಾಹಕ ಮಂಡಲಕ್ಕೂ ಅವರು ಸಭಾಸದರಾಗಿ ಆರಿಸಲ್ಪಟ್ಟಿದ್ದರು.

ಈ ಪ್ರಕಾರದ ಪರಿಷತ್ತುಗಳಲ್ಲಿ ಇವೇ ಮೊದಲನೆಯದು. ಪಾರತಂತ್ರ್ಯಪಂಕದಲ್ಲಿ ಬಿದ್ದು ಪೇಚಾಡುತ್ತಿರುವ ರಾಷ್ಟ್ರಗಳಲ್ಲಿ ಪರಸ್ಪರ ಪ್ರೇಮಸಹಾನುಭೂತಿಗಳು ಬೆಳೆಯಬೇಕೆಂದು ಈ ಪರಿಷತ್ತನ್ನು ಕೂಡಿಸಿದ್ದರು. ಇದಕ್ಕೆ ಆಫ್ರಿಕಾ, ದಕ್ಷಿಣ ಅಮೇರಿಕಾ, ಚೀನ, ಇಜಿಪ್ತ, ಇರಾಣ, ಸೀರಿಯಾ, ಡಚ್, ಈಸ್ಟ ಇಂ-

ಡೀಜ್, ಅನ್ನಾಮ್, ಕೋರಿಯಾ, ಮೋರೋಕ್ಕೋ, ಫ್ರೆಂಚ, ಉತ್ತರ ಆಫ್ರಿಕಾ, ಮೆಕ್ಸಿಕೋ, ಮಧ್ಯ ಮತ್ತು ದಕ್ಷಿಣ ಅಮೇರಿಕಾ ಸಂಸ್ಥಾನಗಳು ತಮ್ಮ ಪ್ರತಿನಿಧಿಗಳನ್ನು ಕಳಿಸಿದ್ದರು. ಯುರೋಪಅಮೇರಿಕೆಯವರು ತಮ್ಮ ಸೋಶಿಲಿಸ್ಟ ಪಂಗಡದ ಕೂಲಿಕಾರ ಮುಂದಾಳುಗಳನ್ನು ಕಳಿಸಿ ಕೊಟ್ಟಿದ್ದರು.

ಸಭೆಗೆ ನಾನಾ ಪ್ರಕಾರದ, ಭಿನ್ನಭಿನ್ನ ಸಂಸ್ಕೃತಿಯ, ಅನೇಕ ಭಾಷೆಗಳ ಪ್ರತಿನಿಧಿಗಳು ಬಂದಿದ್ದರು. ಅವರೆಲ್ಲರಲ್ಲಿಯೂ ಪ್ರೇಮಸಹಾನುಭೂತಿಗಳು ಬೆಳೆಯಲು ಮುಖ್ಯ ಕಾರಣವಾದ ಆದರ್ಶವೊಂದೇ. ದಾಸ್ಯವನ್ನು ದಬ್ಬಿ ಸ್ವಾತಂತ್ರ್ಯವನ್ನು ಸಂಪಾದಿಸುವುದು. ಈ ಭಾವನೆಯಿಂದ ಎಲ್ಲರೂ ಬದ್ಧರಾಗಿದ್ದರು. ಪ್ರತಿಯೊಂದು ರಾಷ್ಟ್ರದವರೂ ಅಲ್ಲಿ ತಮ್ಮ ತಮ್ಮ ನಾಡಗುಡಿಯನ್ನೇರಿಸಿದರು. ಜವಾಹರಲಾಲರೂ ನಮ್ಮ ತ್ರಿರಂಗೀ ರಾಷ್ಟ್ರಧ್ವಜವನ್ನು ಸಭಾಮಂಟಪದ ಮೇಲಕ್ಕೇರಿಸಿ ಹಾರಿಸಿದರು. ಸ್ವತಂತ್ರ ರಾಷ್ಟ್ರಗಳಲ್ಲಿ ಭಾರತ ಸ್ವಾತಂತ್ರ್ಯದ ಧ್ವಜವನ್ನೇರಿಸುವ ಮಂಗಲಪ್ರಸಂಗವು ಇದೇ ಮೊದಲು. ಬ್ರುಸೆಲ್ಸ ಪರಿಷತ್ತಿಗೆ ಬಂದ ಅನೇಕ ರಾಷ್ಟ್ರಗಳ ಸಭಿಕರಲ್ಲಿ ಚೀನ ದೇಶದ ತರುಣರ ಉಲ್ಲಾಸೋತ್ಸಾಹಗಳು ಪ್ರೇಕ್ಷಣೀಯವಾಗಿದ್ದವಂತೆ. "ಚೀನದವರೆಂದರೆ ಯಾವಾಗಲೂ ಅಫೂ ಸೇವನೆಯನ್ನು ಮಾಡಿ ಮಬ್ಬುಗಣ್ಣಿನಿಂದ ಸುಂದಾಗಿ ಬೀಳುವವರೆಂದು ನಮ್ಮ ಕಲ್ಪನೆ. ಆದರೆ ಅಲ್ಲಿ ನೆರೆದ ತರುಣರನ್ನು ನೋಡಿದರೆ ನಮ್ಮ ಕಲ್ಪನೆಯನ್ನು ಬದಲಿಸಬೇಕಾಗುತ್ತಿತ್ತು. ಅವರ ನಿರ್ಭೀತಿಯೂ ಸ್ವಾತಂತ್ರ್ಯಪ್ರೀತಿಯೂ ಇತರರ ಕಣ್ದೆರೆಯುವಂತಹವಿದ್ದವು. ಅವರು ಚೀನದೇಶದ ಕ್ರಾಂತಿಯ ಫಲವಾಗಿ ಬೆಳೆದವರು. ಒಣ ತಾರ್ತಿಕ ಕುಸ್ತಿಗಳನ್ನೆಸಗುವ ಬುದ್ಧಿಬಲಕ್ಕಿಂತಲೂ ನಮ್ಮಲ್ಲಿಯೂ ಆ ವಿದ್ಯುದ್ವೇಗ, ಆತುರಗಳಿದ್ದರೆ ಚೆನ್ನಾಗುತ್ತಿತ್ತು. ಆ ತೇಜತಳಮಳಗಳಿದ್ದರೆ ಒಳಿತಾಗುತ್ತಿತ್ತು ! ಆ ನಿರ್ಭೀತಿಯ ನೋಟ, ಸ್ವಾತಂತ್ರ್ಯದ ಬೇಟಗಳಿದ್ದರೆ ಲೇಸಾಗುತ್ತಿತ್ತು!" ಈ ಮೇರೆಗೆ ಜವಾಹರಲಾಲರು ತಾವು ಕಳುಹಿದ ವರದಿಯಲ್ಲಿ ಬರೆದಿರುವರು.

'ಜಾವಾದಿಂದ ಬಂದ ಮುಸಲ್ಮಾನ ಪ್ರತಿನಿಧಿಗಳಿಂದ, ಹಿಂದುಮುಸಲ್ಮಾನರ ಒಳಜಗಳಗಳ ಬಣಗುತನವು ಬಯಲಾಗುವದು. ಅವರ ಹೆಸರುಗಳೆಲ್ಲ ಬಹುಶಃ ಸಂಸ್ಕೃತ ಜನ್ಯವೇ ಆಗಿರುತ್ತವೆ. ಉಚ್ಚ ತರಗತಿಯ ಹಿಂದುಗಳಂತಿದ್ದು ಅವರ

ಅನೇಕ ಪದ್ಧತಿಗಳು ಹಿಂದುಗಳಂತೆಯೇ ಇವೆ. ಆ ಪ್ರತಿನಿಧಿಗಳಲ್ಲಿ ಕೆಲವರು ಬೌದ್ಧರೂ ಇದ್ದರು. ಈ ಮುಸಲ್ಮಾನಬೌದ್ಧರಲ್ಲಿ ಒಳ್ಳೇ ಒಗೆತನವಿದೆ; ಪ್ರೇಮ ವಿದೆ. ಈ ಪ್ರೀತಿಯ ಸಂಬಂಧಗಳು ಭೀತಿಯಿಂದ ಬೆಳೆದವುಗಳಲ್ಲ. ಎರಡೂ ಮತದವರು ಒಂದೇ ರಾಷ್ಟ್ರದವರೆಂಬ ಐಕ್ಯಭಾವನೆಯಿಂದ ಹೆಗಲಿಗೆ ಹೆಗಲು ಹಚ್ಚಿ ತಮ್ಮ ನಾಡಿನ ಸ್ವಾತಂತ್ರ್ಯಕ್ಕಾಗಿ ಶ್ರಮಬಡುತ್ತಿರುವರು. ಈ ಬುದ್ಧಿಯು ನಮ್ಮಲ್ಲಿಯೂ ಬೆಳೆದಿದ್ದರೆ ಕಲ್ಯಾಣವಾಗುತ್ತಿತ್ತಲ್ಲ! ಪ್ರಭುವೇ! ಆಫ್ರಿಕಾದಿಂದ ಕಲ್ಲಿದ್ದಲಿಗಿಂತ ಕಪ್ಪಾದವರನ್ನು ಹಿಡಿದು ಎಣ್ಣೆಬಣ್ಣದ ನಾನಾ ನಮೂನೆಯವರೂ ಬಂದಿದ್ದರು. ಅವರ ವ್ಯೈಮನಗಳ ಉಬ್ಬು ಮಾತುಮಾತಿನಲ್ಲಿಯೂ ಮಿಂಚಿ ಮೆರೆಯುತ್ತಿತ್ತು. ಸ್ವಾತಂತ್ರ್ಯಕ್ಕಾಗಿ ಅವರು ಪಡುತ್ತಿರುವ, ಪಟ್ಟ ಕಷ್ಟಗಳ ಕತೆಗಳನ್ನು ಕೇಳಿದರೆ ಕಲ್ಲೂ ಕರಗೀತು. ಅವರ ಅಭಿಪ್ರಾಯಗಳನ್ನು ಕೇಳಿದರೆ ಮಾನವರೆಲ್ಲ ಸ್ವತಂತ್ರರಾದಂದೇ ಅವರ ಬಿಡುಗಡೆಯೆಂಬ ತೋರುತ್ತದೆ. ಅಯ್ಯೋ! ಅವರ ತಳಮಳವೇ!'

'ಸೀರಿಯಾ ಮತ್ತು ಉತ್ತರ ಆಫ್ರಿಕದಿಂದ ಬಂದ ಅರಬರ ಮಾದರಿ ಮತ್ತೊಂದು. ಅವರದೊಂದು ಕಾಳೆಗದ ಕೂಟ. ಅವರಿಗೆ ಸ್ವಾತಂತ್ರ್ಯವೆಂದರೆ ಚೆನ್ನಾಗಿ ಗೊತ್ತು. ಅದರ ಸಂಪಾದನೆಗಾಗಿ ಯಾವ ಸಾಧನೆಯೂ ಹಿರಿದಲ್ಲ ಅವರಿಗೆ. ಯಾವ ಬೆದರಿಕೆಯೂ ಎದುರಲ್ಲ. ಇನ್ನಾವ ಮಾತಿಗೂ ಮರುಳಾಗ ದವರವರು. ದಾಸ್ಯತ್ವದ ಹೃದಯದೌರ್ಬಲ್ಯದಿಂದ ಅವರು ಕ್ಷುದ್ರರಾಗಿಲ್ಲ.'

'ಲ್ಯಾಟಿನ್ ಅಮೇರಿಕದಿಂದ ಬಂದ ಪ್ರತಿನಿಧಿಗಳು ಮತ್ತೊಂದು ಬಗೆಯ ವರು. ಏಶಿಯಾ ಖಂಡದಿಂದ ಹೋದ ಅನೇಕ ಸಭಾಸದರಿಗೆ ದಕ್ಷಿಣ ಅಮೇರಿ ಕದವರ ಸಮಸ್ಯೆಗಳೇ ಗೊತ್ತಿರಲಿಲ್ಲ. ಅವರ ದುರಿತಗಳ ಅರಿವೇ ಇರಲಿಲ್ಲ. ಅಮೇರಿಕದ ಸಂಯುಕ್ತ ಸಂಸ್ಥಾನದವರ ಸಾಮ್ರಾಜ್ಯದ ಕೊಬ್ಬು ದಕ್ಷಿಣ ಅಮೇ ರಿಕದವರನ್ನು ಹೇಗೆ ಪೀಡಿಸುತ್ತಿದೆಯೆಂಬುದು ಈ ಪ್ರತಿನಿಧಿಗಳಿಂದಲೇ ತಿಳಿಯ ಬೇಕು. ಹೊರಗಿನಿಂದ ತಮ್ಮ ಸಾಮ್ರಾಜ್ಯದಮೇಲೆ ಕೈಮಾಡಿ ದಾಳಿಮಾಡುವ ಹವ್ಯಾಸಕ್ಕೆ ಯಾರಿಗೂ ಬೀಳಲು ಸಾಧ್ಯವಿಲ್ಲೆಂದು ಅವರ ಅಂದಾಜು. ಆದ್ದರಿಂದಲೇ ತಮ್ಮ ಸಾಮ್ರಾಜ್ಯದ ಕಾಲ್ಕೆಳಗೆ ಕಂಡವರನ್ನು ತುಳಿಯಲು ಅವರು ನೋಡು ತ್ತಾರೆ. ಈ ಸಾಮ್ರಾಜ್ಯದ ಸೆಕೆಯಿಂದ ಬಿಸಿಹತ್ತಿ ಮಧ್ಯ ಮತ್ತು ದಕ್ಷಿಣ ಅಮೇರಿ

ಕದವರು ಎಚ್ಚತ್ತಿದ್ದಾರೆ. ಆದರೆ ಐಕ್ಯವಿಲ್ಲದಿರುವುದೇ ಲ್ಯಾಟಿನ್ ಅಮೇರಿಕದ ಕೊರತೆ. ಅವರಲ್ಲಿ ಒಕ್ಕಟ್ಟು ಉಳಿಯದಂತೆ ಮಾಡಿ ತಮ್ಮ ಬೇಳೆಯನ್ನು ಬೇಯಿ ಸುವುದರಲ್ಲಿಯೇ ಅಮೇರಿಕದ ಸಂಯುಕ್ತ ಸಂಸ್ಥಾನದ ಹಿಡಿತವಿದೆ. ಬ್ರುಸೆಲ್ಸ ಕಾಂಗ್ರೆಸಿನಲ್ಲಿ ಬಂದ ದಕ್ಷಿಣ ಅಮೇರಿಕದ ಎಲ್ಲ ಪ್ರತಿನಿಧಿಗಳಲ್ಲಿ ಒಕ್ಕಟ್ಟನ್ನುಂಟು ಮಾಡಲಾಯಿತು.'

'ಬ್ರುಸೆಲ್ಸ ಕಾಂಗ್ರೆಸಿನ ಮಂದಿರದಲ್ಲಿ ದೊಡ್ಡ ದೊಡ್ಡ ಬಿಳಿ ಬೋರ್ಡು ಗಳನ್ನು ತೂಗುಹಾಕಿದ್ದರು. ಅವುಗಳಲ್ಲಿ ಹಿಂದುಸ್ಥಾನದಂಥ "ಬಹುರತ್ನಾ ವಸುಂಧರಾ" ಎಂಬ ದೇಶದಲ್ಲಿ ಬ್ರಿಟಿಷರ ಆಳಿಕೆಯ ಆರಂಭದಿಂದಾದ ಬರಗಾಲ ಗಳನ್ನು ಬಣ್ಣಿಸಿದ್ದರು. ನಮ್ಮ ಬಾಳಿಕೆ–ಗಳಿಕೆಗಳನ್ನು ತೋರಿಸಿದ್ದರು. ಕಳೆದ ಪ್ರಪಂಚ ಯುದ್ಧದಲ್ಲಿ ಭಾರತಯೋಧರನ್ನು ಬ್ರಿಟಿಷ ಸಾಮ್ರಾಜ್ಯ ವಿಸ್ತಾರಕ್ಕಾ ಗಿಯೂ ಇತರರ ಸ್ವಾತಂತ್ರ್ಯವನ್ನು ಸೆಳೆಯುವುದಕ್ಕಾಗಿಯೂ ಹೇಗೆ ಉಪಯೋ ಗಿಸಿದರೆಂಬುದನ್ನು ತಿಳುಹಿದ್ದರು.'

ಜವಾಹರಲಾಲರು ತಮ್ಮ ವರದಿಯಲ್ಲಿ ಉಲ್ಲೇಖಿಸಿದಮೇರೆಗೆ ಸಾಮ್ರಾಜ್ಯ ವಿರೋಧಿ ಸಂಘದ ಸಭೆಯ ಮುಖ್ಯ ಉದ್ದೇಶಗಳು ಸ್ವಾತಂತ್ರ್ಯಕ್ಕಾಗಿ ಹೋರಾಡು ವವರ ಸ್ನೇಹವೂ ಕೂಲಿಕಾರರ ಒಕ್ಕಟ್ಟೂ ಆಗಿದ್ದವು. ಇದರಿಂದ ಸ್ವಾತಂತ್ರ್ಯ ಸಮರಕ್ಕೂ ಕೂಲಿಕಾರರ ಬಿಡುಗಡೆಯ ಪ್ರಯತ್ನಗಳಿಗೂ ಹೆಚ್ಚು ಬಿಡುವುದಿ ಲ್ಲೆಂದು ಧ್ವನಿತವಾಗುತ್ತದೆ. ಅನೇಕ ದೇಶಗಳು ತಾವು ಬಿಡುಗಡೆಹೊಂದಿ ದೊಡನೆ ಇತರರನ್ನು ಪೀಡಿಸುವುದಕ್ಕೆ ಪ್ರಾರಂಭಿಸುತ್ತವೆ. ಈ ಪರಪೀಡನೆಯು ಸರ್ವಸಾಮಾನ್ಯವೋ ಏನೋ ಎಂಬಂತೆ ತೋರುತ್ತದೆ. ದಾಸ್ಯತ್ವದಲ್ಲಿ ದಿಂಡರಿಕೆ ಹಾಕುತ್ತಿದ್ದ ಎರಡು ರಾಷ್ಟ್ರಗಳು ಸಾಧಾರಣತಃ ತಮ್ಮ ತಮ್ಮೊಳಗೆ ಕಾದಾಡುವು ದಿಲ್ಲ. ಆದರೆ ಸಾಮ್ರಾಜ್ಯವಾದಿಗಳಾದ ಬ್ರಿಟಿಷರು ಭಾರತವನ್ನುಪಯೋಗಿಸಿದಂತೆ ಉಪಯೋಗಿಸಿದರೆ ಉಪಾಯವಿಲ್ಲ.

ಇಂಗ್ಲಂಡದ ಕೂಲಿಕಾರರ ಪಕ್ಷದವರಲ್ಲಿ ಇನ್ನೊಂದು ಕಲ್ಪನೆಯ ಉದಯ ವಾಗಿದೆ. ಪರರಾಷ್ಟ್ರಾಪಹಾರ (Exploitation) ದಿಂದ ಸ್ವದೇಶದ ಶ್ರಮ ಜೀವಿಗಳಿಗೇನೂ ಹೆಚ್ಚಿನ ಲಾಭವಿಲ್ಲೆಂದು ಅವರ ಆಲೋಚನೆ. ಅದರಿಂದ ಕೆಲವು ಧನಿಕರಿಗೆ ಮಾತ್ರ ತುಂಬಾಲಾಭವಿದೆ. ಈ ಹಿಡಿಯಷ್ಟು ಜನರ ಲಾಭಕ್ಕೋಸ್ಕರ

ಬೇರೆ ಬೇರೆ ದೇಶಗಳ ಲೆಕ್ಕವಿಲ್ಲದ ಬಡವರು ಬಲಿಯಾಗಬೇಕು. ಆದ್ದರಿಂದ ಇತ್ತೀಚೆಗೆ ಕೂಲಿಕಾರರ ಪಕ್ಷದವರು ಬೇರೊಂದು ದೇಶದ ಮೇಲೆ ದಾಳಿಯನ್ನಿಡಲಿಕ್ಕೆ ಬಿಡುವುದೇ ಇಲ್ಲ. ಏಕೆಂದರೆ ಅದರಿಂದ ತಮ್ಮ ಹಿತ ಸಾಧಿಸುವುವೊತ್ತಟ್ಟಿಗಿರಲಿ ತಮ್ಮ ವೇತನವು ಕಡಿಮೆಯಾಗುವುದೆಂದೂ ಕುಟುಂಬದ ಖರ್ಚು ಬೆಳೆಯುವದೆಂದೂ ಅವರು ಕಂಡುಹಿಡಿದಿದ್ದಾರೆ. ಇರಲಿ.

ಈ ಪರಿಷತ್ತಿನಲ್ಲಿ ಅನೇಕ ಮಹತ್ತ್ವದ ನಿರ್ಣಯಗಳು ಗೊತ್ತಾದವು. ಅದರಲ್ಲಿ ಹಿಂದುಸ್ಥಾನಕ್ಕೆ ಸಂಬಂಧಿಸಿ ಈ ಮುಂದಿನ ಗೊತ್ತುವಳಿಯಾಯಿತು.

ಹಿಂದುಸ್ಥಾನದ ಪೂರ್ಣ ಸ್ವಾತಂತ್ರ್ಯದ ಚಳವಳಕ್ಕೆ ಈ ಕೊಂಗ್ರೆಸಿನ ಬೆಂಬಲವಿದೆ. ಮತ್ತು ಇಡೀ ಪ್ರಪಂಚವು ದಾಸ್ಯತ್ವದಿಂದ ಬಿಡುಗಡೆ ಹೊಂದಬೇಕಾದರೆ ಮೊದಲು ಹಿಂದುಸ್ಥಾನವು ಸ್ವತಂತ್ರವಾಗುವುದವಶ್ಯವಿದೆ. ಇತರ ರಾಷ್ಟ್ರದ ಪ್ರಜೆಗಳೂ ಕೆಲಸಗಾರರೂ ಭಾರತಕ್ಕೆ ಈ ಕಾರ್ಯದಲ್ಲಿ ಮನಸ್ಸುಗೊಟ್ಟು ನೆರವಾದಾರು. ಮತ್ತು ಹಿಂದುಸ್ಥಾನದಲ್ಲಿ ಪರಕೀಯ ಸೈನ್ಯವು ಹೋಗದಂತೆ ಎಚ್ಚರ ತೆಗೆದುಕೊಂಡಾರೆಂಬ ವಿಶ್ವಾಸವಿದೆ. ಆದರೆ ಹಿಂದುಸ್ಥಾನವು ತನ್ನ ಕಾರ್ಯಕ್ರಮದಿಂದ ಒಕ್ಕಲಿಗರನ್ನೂ ಪೂರ್ಣ ಸ್ವತಂತ್ರರನ್ನಾಗಿ ಮಾಡುವ ಮತ್ತು ಜಗತ್ತಿನ ಸ್ವಾತಂತ್ರ್ಯದ ಚಳವಳಗಳಿಗೆ ಸಹಾಯಮಾಡುವ ಉದ್ದೇಶವನ್ನಿಡಬೇಕು. ಏಕೆಂದರೆ ರೈತರೂ ಗೈಮೆಯವರೂ ಸ್ವತಂತ್ರರಾಗದೆ ನಿಜವಾದ ಸ್ವಾತಂತ್ರ್ಯವಿಲ್ಲ.

ಕೊಂಗ್ರೆಸಿನವರು ಈ ನಿರ್ಣಯವನ್ನು ಕೈಕೊಂಡ ಕೂಡಲೆ ಚೀನ-ಹಿಂದುಸ್ಥಾನಗಳ ಸಭಾಸದರು ಸೇರಿ ತಮ್ಮ ಒಂದು ಜಾಹೀರ ಪ್ರಕಟನೆಯನ್ನು ತೆಗೆದರು. ಮೂರು ಸಾವಿರ ವರ್ಷಗಳಿಂದ ಮೊಗಲ ಬಾದಶಾಹಿಯವರೆಗೆ ಚೀನ-ಹಿಂದುಸ್ಥಾನಗಳ ಸ್ನೇಹಸಂಬಂಧಗಳು ಹೇಗೆ ಅಬಾಧಿತವಾಗಿದ್ದವೆಂಬುದನ್ನೂ ಭಾರತವು ಬ್ರಿಟಿಷರಾಧಿಪತ್ಯಕ್ಕೊಳಪಟ್ಟನಂತರ ಹೇಗೆ ಈ ಸಂಬಂಧದಲ್ಲಿ ವ್ಯತ್ಯಯ ಬರಹತ್ತಿತೆಂಬುದನ್ನೂ ಹಿಂದೀ ಸೈನ್ಯದ ಸಹಾಯದಿಂದ ಚೀನದ ಮೇಲೆ ಹೇಗೆ ದೌಡುದಾಳಿಗಳಾದವೆಂಬುದನ್ನೂ ಹಾಂಗ ಕಾಂಗನ್ನು ನುಂಗಿ ನೀರು ಕುಡಿದು ಶಾಂಘಾಯಿಯಲ್ಲಿ ಸುಮಾರು ೯೭ ವರ್ಷ ಹಿಂದೀ ಸೈನಿಕರ ತಳವೂರಿ ಚೀನ ಜನರನ್ನು ಹತ್ತೊತ್ತುವುದರ ಹಂಚಿಕೆ ಮತ್ತು ಕೆಲವು ಸಮಯಗಳಲ್ಲಿ ಚೀನ ಜನರ

ಮೇಲೆ ಗುಂಡಿನ ಸುರಿಮಳೆಯನ್ನು ಮಾಡುವುದರ ಪ್ರಯತ್ನಗಳು ಹೇಗೆ ಮಾಡಲ್ಪಟ್ಟವೆಂಬುದನ್ನು ಚೆನ್ನಾಗಿ ವರ್ಣಿಸಿ, ಭಾರತಕ್ಕೆ ಬ್ರಿಟಿಷರಾಧಿಪತ್ಯವು ಬಂದಬಳಿಕ ಭಾರತಚೀನಗಳ ಸಾಂಸ್ಕೃತಿಕ ಚಲನವಲನಗಳು ಬಂದುಬಿದ್ದು ಎರಡೂ ರಾಷ್ಟ್ರಗಳಿಗೂ ಯಾವ ಮಿತಿಮೀರಿದ ಹಾನಿಯಾಗಿದೆಯೆಂಬುದನ್ನು ಸರಿಯಾಗಿ ವಿವರಿಸಿ ಈ ಪೀಡೆಗಳ ಪರಿಹಾರವಾಗಬೇಕಾದರೆ ಭಾರತಸ್ವಾತಂತ್ರ್ಯವೆಷ್ಟು ಅವಶ್ಯವಿದೆಯೆಂಬ ಸಂಗತಿಯನ್ನು ಸೂಚಿಸಿ, ಕೊನೆಗೆ ಆ ಪ್ರಕಟನೆಯಲ್ಲಿ"ಹಿಂದೀ ರಾಷ್ಟ್ರೀಯ ಚಳವಳಿಯ ಸೂತ್ರಧಾರನು ಚೀನ ಸ್ವಾತಂತ್ರ್ಯೋದ್ಯಮದಲ್ಲಿ ಸಹಕರಿಸಿದರೆ ಉಭಯ ರಾಷ್ಟ್ರಗಳೂ ಸ್ವತಂತ್ರವಾಗದೆ ಇರಲಾರವೆಂದು ನಮಗೆ ಅತ್ಯಂತ ನಂಬಿಗೆಯಿದೆ" ಎಂಬದಾಗಿ ಪ್ರಸಿದ್ಧಮಾಡಿರುವರು. ಈ ಪ್ರಸಿದ್ಧ ಪತ್ರಿಕೆಯನ್ನುಳಿದು ಚೀನ-ಭಾರತ-ಬ್ರಿಟಿಷ ಸಭಾಸದರು ಸೇರಿ ಮತ್ತೊಂದನ್ನು ಪ್ರಕಟ ಮಾಡಿದರು. ಈ ಮೂರು ದೇಶಗಳಲ್ಲಿ ಲೋಕದ ಅಹಿತವನ್ನು ಮಾಡುವ ನಿಜವಾದ ರಾಷ್ಟ್ರವು ಇಂಗ್ಲಂಡ ಆಗಿರುವುದರಿಂದ ಅದು ತನ್ನ ಪಾಪವಿಮೋಚನೆಗಾಗಿ ಯಾವ ಪ್ರಾಯಶ್ಚಿತ್ತವನ್ನು ಮಾಡಬೇಕೆಂಬುದನ್ನು ಇಂಗ್ಲಂಡದ ಪ್ರತಿನಿಧಿಗಳು ಹೇಳಬೇಕೆಂಬುದನ್ನು ಅದರಲ್ಲಿ ಕಾಣಿಸಿ ಈ ಮುಂದಿನ ಆಶಯದ ಪ್ರಕಟನೆಯನ್ನು ಅವರೇ ತೆಗೆದು ಅದಕ್ಕೆ ಜಾರ್ಜ ಲಾನ್ಸಬರಿ ಸಹಿತ ಸರ್ವ ಬ್ರಿಟಿಷ ಪ್ರತಿನಿಧಿಗಳೂ ಪಂಡಿತ ಜವಾಹರಲಾಲರೂ ಸಹಿ ಮಾಡಿರುವರು.

ಈ ಕೆಳಗೆ ಸಹಿ ಮಾಡಿದ ನಾವು ಚೀನ-ಬ್ರಿಟಿಷ-ಭಾರತ ಪ್ರತಿನಿಧಿಗಳು— ಸಾಮ್ರಾಜ್ಯಸತ್ತಾವಾದೀ ದೇಶದೊಳಗಿನ ಶ್ರಮಜೀವಿಗಳು (ಕೂಲಿಕಾರರು) ಈ ಕಾರ್ಯಗಳನ್ನು ಮಾಡಬೇಕೆಂಬ ಅಭಿಪ್ರಾಯವುಳ್ಳವರಾಗಿದ್ದೇವೆ. "ತಮ್ಮ ಕೈಕೆಳಗಿರುವ ಜಿತದೇಶಗಳ ಪ್ರಜೆಗಳಿಗೆ ಸ್ವಾತಂತ್ರ್ಯ ಬೇಕೆಂಬ ಇಚ್ಛೆಯಿದ್ದರೆ ಅವರ ಕಾರ್ಯಕ್ಕೆ ಪೂರ್ಣ ಬೆಂಬಲವೀಯಬೇಕು.

ಒಕ್ಕಲುನಾಡಿನ ( ಜಿತ ) ಜನರ ವಿರುದ್ಧ ನಡೆದಿರುವ ಸರ್ವಪ್ರಕಾರದ ವಿರೋಧಗಳ ತೀವ್ರ ಪ್ರತಿಕಾರಮಾಡಬೇಕು.

ಜಿತರಾಷ್ಟ್ರಗಳನ್ನು ಹೆದರಿಸಿ ಹತ್ತೊತ್ತುವುದಕ್ಕಾಗಿ ಸೈನ್ಯ, ನೌಕೆ, ವಿಮಾನ ಇತ್ಯಾದಿಗಳನ್ನು ಇಟ್ಟು ಸಾಕುವುದಕ್ಕಾಗಿ ಮತ್ತು ಕಳಿಸುವುದಕ್ಕಾಗಿ ಹಣ ವೆಚ್ಚಮಾಡಬಾರದಾಗಿ ವಿರೋಧ ಮಾಡಬೇಕು.

ಸಾಮ್ರಾಜ್ಯಸತ್ತೆಯ ದುಷ್ಪರಿಣಾಮಗಳನ್ನು ಪ್ರಜೆಗಳಿಗೆ ತಿಳಿಸಿಹೇಳಬೇಕು. ಕೂಲಿಕಾರರ ವಿರುದ್ಧವಾಗಿ ಸಾಮ್ರಾಜ್ಯಸತ್ತಾವಾದಿಗಳು ನಡೆಸುತ್ತಿರುವ ರಹಸ್ಯಕಾರಭಾರಗಳನ್ನು ಬೈಲಿಗೆಳೆಯುವುದು. " ಇದರ ಹೊರತು ಚೀನದಲ್ಲಿ ಸಾಮ್ರಾಜ್ಯಸತ್ತಾವಾದಿಗಳು ಹಾಕುತ್ತಿರುವ ಗುಡುಗನ್ನುದ್ದೇಶಿಸಿ ಮತ್ತು ಚೀನ ಭಾರತದೇಶಗಳ ಸ್ವಾತಂತ್ರ್ಯಸಮರದ ಸದ್ದಡಿಗಿಸಬೇಕೆಂದು ಮಾಡುವ ಪ್ರಯತ್ನ ಗಳನ್ನು ಕಾಣಿಸಿ ಇನ್ನೊಂದು ಪ್ರಕಟನೆಯನ್ನು ಪ್ರಸಿದ್ಧಮಾಡಿದರು. ಇವೆಲ್ಲ ಸಂಗತಿಗಳ ಮೇಲಿಂದ ಪಂಡಿತ ಜವಾಹರಲಾಲರ ಮನಸ್ಸಿನಲ್ಲಿ ಸ್ವದೇಶದ ಬಗ್ಗೆ ಯಾವ ಅಭಿಮಾನವೂ ಸ್ಮರಣವೂ ಇದ್ದವೆಂಬುದು ಸುಸ್ಪಷ್ಟವಾಗುತ್ತದೆ. ಈ ವಿಷಯವಾಗಿ ಪರರಾಷ್ಟ್ರಗಳಲ್ಲಿ ಅವರು ನಡೆಸಿರುವ ಅವಿಶ್ರಾಂತಶ್ರಮವೂ ತಿಳಿದು ಬರುತ್ತದೆ.

ವಿದೇಶಗಳೊಡನೆ ಸಾಂಸ್ಕೃತಿಕ ಸಂಬಂಧ ಬೆಳೆಸುವ ಸಂಘ ( The Society of Cultural relations with foreign countries. ) ದವರು ಕಳುಹಿದ ಆಮಂತ್ರಣದ ಮೇರೆಗೆ ಪಂಡಿತರು ರಶಿಯಾ ದೇಶಕ್ಕೆ ತೆರಳಿದರು. ಅವರು ಬ್ರುಸೆಲ್ಸದಿಂದ ನೆಟ್ಟಗೆ ಶ್ರೀಮತಿ ಕಮಲಾ ನೆಹರು ಗಳೊಂದಿಗೆ ಅಲ್ಲಿಗೇ ಹೋದರು. ಆಗ ಸೋವಿಯೆಟ್ ಪ್ರಜಾಸತ್ತೆಯ ಹತ್ತ ನೆಯ ವಾರ್ಷಿಕೋತ್ಸವವಿತ್ತು. ಮೇಲ್ಕಂಡ ಸಂಘದ ನಿಮಂತ್ರಣದ ಮೇರೆಗೆ ಈ ಹತ್ತನೆಯ ವಾರ್ಷಿಕೋತ್ಸವಕ್ಕೆ ಹೋದರು. ಬ್ರುಸೆಲ್ಸದಿಂದ ಬರ್ಲಿನ ಪೋಲಂಡಗಳ ಮಾರ್ಗವಾಗಿ ಅವರು ರಶಿಯಾ ದೇಶವನ್ನು ಸೇರಿದ್ದು. ತಾ. ೭ನೇ ನವಂಬರದ ದಿನ ಅವರು ರಶಿಯಾ ದೇಶದಲ್ಲಿ ಅಡಿಯನ್ನಿಟ್ಟರು. ರಶಿಯಾ ದೇಶದ ಸರಕಾರದ ಬಗ್ಗೆ, ರಾಜ್ಯಕ್ರಾಂತಿಯ ಬಗ್ಗೆ ಎಷ್ಟೋ ಜನರು ಮೊದಲು ಮಾತ ನಾಡಿದ್ದನ್ನೂ ಬರೆದದ್ದನ್ನೂ ಅವರು ಓದಿದ್ದರು. ಆದರೆ ಪ್ರತ್ಯಕ್ಷ ಅಲ್ಲಿ ಹೋಗಿ ನೋಡಿದ ಮೇಲೆ ಅವರಿಗೆಲ್ಲವೂ ವಿಚಿತ್ರವಾಗಿ ತೋರಿತು. ರಶಿಯಾದ ಹಿತಶತ್ರು ಗಳು ವಿದೇಶಗಳಲ್ಲಿ ಅದರ ಬಗ್ಗೆ ಎಂಥೆಂಥ ತುದಿಬುಡವಿಲ್ಲದ ತಪ್ಪು ಕಲ್ಪನೆ ಗಳನ್ನು ಅನ್ಯಾಯವಾಗಿ ಸುಸಂಘಟಿತ ಪ್ರಯತ್ನದಿಂದ ಹಬ್ಬಿದ್ದಾರೆಂಬುದನ್ನು ಜವಾಹರಲಾಲರು ಕಂಡುಹಿಡಿದರು. ಈ ವಿಷಯಗಳನ್ನೆಲ್ಲ ಪಂಡಿತರು ಸವಿಸ್ತಾರ ವಾಗಿ ವಿಮರ್ಶಿಸಿ ಮಾರ್ಮಿಕವಾಗಿ " ಸೋವಿಯೆಟ್ ರಶಿಯಾ" ಎಂಬ ತಮ್ಮ ಗ್ರಂಥದಲ್ಲಿ ಬರೆದಿರುವರು. ಇದರ ಮೇಲಿಂದ ರಶಿಯಾದೊಳಗಿನ ಕೂಲಿಕಾರ

ವರ್ಗದ ಸುಖಸಂಪತ್ತಿನ ಒಳ್ಳೇ ಕಲ್ಪನೆಯು ಬರುವದಿಷ್ಟೇ ಅಲ್ಲ ಅದರೊಂದಿಗೆ ಗ್ರಂಥಕರ್ತರ ಸೂಕ್ಷ್ಮಾವಲೋಕನಶಕ್ತಿಯೂ ಪರಿಸ್ಥಿತಿಯ ನೆಲೆಬೆಲೆಗಳನ್ನು ಗೊತ್ತುಹಚ್ಚುವ ಚಿಕಿತ್ಸಕ ಮತ್ತು ವಿಮರ್ಶಕಬುದ್ಧಿಯೂ ತಿಳಿದುಬರುತ್ತವೆ. ರಶಿಯಾ ದೇಶವಲ್ಲಿ ಅನೇಕ ಕಡೆ ತಿರುಗಾಡಿ ಇದ್ದ ಸ್ಥಿತಿಯನ್ನು ಚೆನ್ನಾಗಿ ಪರಿಶೀಲಿಸಿ ಸಾಂಗೋಪಾಂಗವಾಗಿ ಬರೆದದ್ದು ಇದೇ ಮೊದಲನೇ ಪುಸ್ತಕವಾದ್ದರಿಂದ ಎಲ್ಲರೂ ಅದನ್ನು ತರಿಸಿ ಓದಬೇಕು. ಸೋವಿಯಟ್ ರಾಜ್ಯಪದ್ಧತಿಯು ಹೇಗಿದೆ, ಅಲ್ಲಿಯ ಒಕ್ಕಲಿಗರ ಸ್ಥಿತಿಯು ಹೇಗಿದೆ, ತರುಂಗಗಳು ಹೇಗಿವೆ, ಶಿಕ್ಷಣದ ವ್ಯವಸ್ಥೆಯು ಯಾವ ಪ್ರಕಾರದ್ದಿದೆ ಮತ್ತು ಅಲ್ಪ ಸಂಖ್ಯಾಕರ ಸಮಸ್ಯೆಯನ್ನು ಅಲ್ಲಿ ಹೇಗೆ ಬಿಡಿಸಿರುವರು ಎಂಬೆಲ್ಲ ವಿಷಯಗಳ ವಿವೇಚನೆಯು ವಾಚನೀಯವಾಗಿದೆ.

ಅಲ್ಲಿಯ ಸೆರೆಮನೆಗಳನ್ನು ಕೇವಲ ಶಿಕ್ಷೆಯು ಸಲುವಾಗೆಂದು ಸ್ಥಾಪಿಸಿಲ್ಲ. ಆದರೆ ಅಪರಾಧಿಗಳನ್ನು ಸುಧಾರಿಸುವದಕ್ಕೋಸ್ಕರ. ಹಿಂದುಸ್ಥಾನದಲ್ಲಿ ಸೆರೆಯಾಳುಗಳನ್ನು ಕಾಡುಮೃಗಗಳಂತೆಯೂ ದಸ್ಯುಗಳಂತೆಯೂ ನಡೆಸಿಕೊಂಡು ಮನುಷ್ಯತ್ವವನ್ನು ಮರೆಯಿಸುವಂತೆ ಶಿಕ್ಷೆಕೊಡುವರು. ಅಲ್ಲಿಯಾದರೋ ಪ್ರಜೆಗಳು ಶಿಕ್ಷೆಗೊಳಪಟ್ಟರೂ ಶಿಕ್ಷಣವನ್ನು ಹೊಂದಿ ಜಾಣರಾಗಿ, ಸಭ್ಯರಾಗಿ, ಸುಧಾರಿಸಿ ಹಿಂದಿರುಗುವರು. ಇಲ್ಲಿಗೂ ಅಲ್ಲಿಗೂ ಅಜಗಜಾಂತರ !

ಅಲ್ಲಿಯ ಶಿಕ್ಷಣಪದ್ಧತಿಯಲ್ಲಿ ಆಧುನಿಕ ವಿದ್ಯಾತತ್ತ್ವಗಳನ್ನೆಲ್ಲ ಕಾರ್ಯರಂಗಕ್ಕಿಳಿಸಿ ಅನುಭವದಿಂದ ತಿದ್ದುಪಡೆಗಳನ್ನು ಮಾಡಿ ಪರಿಹೊಂದಿಸಿಕೊಂಡಿರುವರು. ಅದರಲ್ಲೊಂದು ವಿಶೇಷವೇನಂದರೆ, ಮೊದಲು ವಿದ್ಯಾರ್ಥಿಯು ತಾನಿದ್ದ ಸ್ಥಳದ ಸುತ್ತುಮುತ್ತಲಿನ ವಸ್ತುಸ್ಥಿತಿಯನ್ನು ಚೆನ್ನಾಗಿ ಅರಿತುಕೊಳ್ಳುವಂತೆ ಮಾಡುವರು. ಆ ಬಳಿಕ ಅವಾಂತರ ಶಿಕ್ಷಣ. “ ಡೌನ್ ವುಯಿಥ್ ಇಲ್ಲಿಟರಸಿ” (ನಿರಕ್ಷರತೆಯನ್ನು ನೆಲಸಮಮಾಡಿರಿ) ಎಂಬ ಅಭಿಧಾನದ ಒಂದು ಸಂಸ್ಥೆಯೇ ಇದ್ದು, ಅದು ದೇಶದಲ್ಲೆಲ್ಲ ಶಿಕ್ಷಣ ಪ್ರಸಾರದ ಕಾರ್ಯವನ್ನು ಲಗುಬಗೆಯಿಂದಲೂ ಲವಲವಿಕೆಯಿಂದಲೂ ಮಾಡುತ್ತದೆ. ನಾಡಿನಲ್ಲಿ ಓದುಬರೆಹ ಬಾರದವರು ಯಾರೂ ಉಳಿಯಕೂಡದೆಂಬ ಈ ಸಂಸ್ಥೆಯವರ ಕೃತನಿಶ್ಚಯುವಿದೆ. ಸೋವಿಯೆಟ್ ಸರಕಾರದ ನೆರವಿನಿಂದ ಇವರ ಸಂಕಲ್ಪವು ದಿನದಿನಕ್ಕೂ ಈಡೇರುತ್ತಿದೆ.

ಅಲ್ಪ ಸಂಖ್ಯಾಕರಿಗೆ ಬಹು ಸಂಖ್ಯಾಕರ ಬೆದರಿಕೆಯು ಅನ್ನಿಸಲೇ ಬಾರದೆಂಬ ಬಗ್ಗೆ ಸೋವಿಯೆಟ್ ಸರಕಾರದವರು ಬಹು ದಕ್ಷರಾಗಿದ್ದಾರೆ.

ರಶಿಯಾ ದೇಶದಲ್ಲಿ ನಡೆಯುವ ರಾಜಕೀಯ ಮತ್ತು ಸಾಮಾಜಿಕ ವಿಷಯುಗಳ ಅಭಿನವಪ್ರಯೋಗಗಳಿಂದ ಪ್ರತಿಯೊಂದು ಸಾಮ್ರಾಜ್ಯವಾದೀ ರಾಷ್ಟ್ರಕ್ಕೆ ಎದೆಗುಕ್ಕು ಹಿಡಿದಂತಾಗಿದೆ. ರಶಿಯಾದ ಮೇಲೆ ಕೈಮಾಡಿ ಏರಿ ಸಾರುವ ಸುಪ್ರಸಂಗವು ಎಂದು ಬಂದೀತೆಂದು ಅವುಗಳೆಲ್ಲವೂ ಎದುರುನೋಡುತ್ತಿವೆ. ಇವೆಲ್ಲವುಗಳಲ್ಲಿ ಬ್ರಿಟಿಷ ಸರಕಾರವೇ ಮುಕುಟಮಣಿ. ರಶಿಯಾದೊಡನೆ ಕಾಲ್ಕೆದರಿ ಕಾಳಗಮಾಡುವುದಕ್ಕೂ ಇವರು ಹೇಸುವಂತಿಲ್ಲ. ಈ ಬಗ್ಗೆ ಪಂಡಿತರು ತಮ್ಮ ಪುಸ್ತಕದಲ್ಲಿ "ರಶಿಯಾದ ಇಂದಿನ ಸ್ಥಿತಿಯನ್ನು ನೋಡಲಾಗಿ ಅಥವಾ ಇನ್ನು ಮುಂದೆಯೂ ಅದು ಹಿಂದುಸ್ಥಾನದ ಮೇಲೆ ದೌಡುಮಾಡೀತೆಂಬಂತಿಲ್ಲ. ಅವರಿಗೆ ರಾಜ್ಯವಿಸ್ತಾರಮಾಡಬೇಕೆಂಬ ಹವ್ಯಾಸವಿದ್ದಂತೆ ತೋರುವುದಿಲ್ಲ. ತಮ್ಮ ನಾಡು ಮುಖ್ಯತಃ ಒಕ್ಕಲತನದ್ದಾದ್ದರಿಂದ ಅದನ್ನು ಹೇಗೆ ಅಭಿವೃದ್ಧಿಗೆ ತರುವುದು ಮತ್ತು ಉದ್ಯೋಗಗಳನ್ನು ಊರ್ಜಿತಾವಸ್ಥೆಗೆ ಹೇಗೆ ತರುವುದು ಇವುಗಳಲ್ಲಿಯೇ ಅವರ ಸರ್ವ ಲಕ್ಷ್ಯವಿದೆ. ಈ ಉದ್ದೇಶಗಳಿಗೋಸ್ಕರ ಅವರಿಗೆ ಬಂಡವಾಳ ಮತ್ತು ತಜ್ಞರ ಕೊರತೆಯುಂಟಾಗಿದೆ. ಹಿಂದುಸ್ಥಾನವಲ್ಲಿ ಇವೆರಡಕ್ಕೂ ಸೊನ್ನೆಯೇ! ಪಾರತಂತ್ರ್ಯದ ಪ್ರಭಾವದಿಂದ ನಮ್ಮ ಬಡತನಕ್ಕೂ ಬುದ್ಧಿಗೇಡಿತನಕ್ಕೂ ಎಣೆಯೇ ಇಲ್ಲ. ವಸ್ತುತಃ ಹಿಂದುಸ್ಥಾನ-ರಶಿಯಾಗಳಲ್ಲಿ ಕಲಾಪದ ನೆವವೂ ಇಲ್ಲ, ಕಾರಣವೂ ಇಲ್ಲ. ಇಂದು ಕುಸ್ತಿಯಾಗಬೇಕಾದರೆ ರಶಿಯಾ-ಇಂಗ್ಲೆಂಡುಗಳಿಗೆ. ಮತ್ತು ಅದು ಇಂಗ್ಲೆಂಡದ ಲೋಭಗ್ರಸ್ತ ತುಂಟ ಮನಸ್ಸಿನ ದ್ಯೋತಕವಾಗಿದೆ. ರಶಿಯಾ ದೇಶವು ನಮ್ಮ ನಿತ್ಯಶತ್ರುವೆಂದು ನಮಗೆ ನಿರಂತರವೂ ವಸ್ತುಪಾಠ ನಡೆದಿದೆ. ಆದರೆ ನಿಜಸ್ಥಿತಿಯು ಹಾಗೆಂದಿಗೂ ಇಲ್ಲ. ಆದ್ದರಿಂದ ಇಂಗ್ಲಂಡದ ಕೈಖಡ್ಗವಾಗಿ ನಮ್ಮ ನಾಡು ರಶಿಯಾ ದೇಶವನ್ನು ಎಷ್ಟು ಮಾತ್ರಕ್ಕೂ ಪೀಡಿಸದಿರಲಿ! ಈ ವಿಷಯದಲ್ಲಿ ನಾವು ಅತ್ಯಂತ ದಕ್ಷರಾಗಿರತಕ್ಕದ್ದು" ಎಂಬದಾಗಿ ಸ್ಪಷ್ಟವಾಗಿ ಹೇಳಿದ್ದಾರೆ.

ಯುರೋಪದ ಪ್ರವಾಸವನ್ನು ಮುಗಿಸಿ ಪಂಡಿತರು ಸ್ವದೇಶಕ್ಕೆ ಮರಳಿ ಬಂದರು. ಬರುವಾಗ ಬರಿಗೈಯಿಂದ ಪ್ರವೇಶಮಾಡಲಿಲ್ಲ. ಭಾರತದ ಹಿಗ್ಗಿನ

ಕನಸುಗಳಿಗೂ ಮಹತ್ವಾಕಾಂಕ್ಷೆಗಳಿಗೂ ಪೋಷಕವಾದ ವಿಚಾರಭಾಂಡಾರವನ್ನು ಶೇಖರಿಸಿಕೊಂಡು ಬಂದರು. ಸ್ವಾತಂತ್ರ್ಯದ ಕುದಿಯನ್ನು ಉಕ್ಕಿಸುವ ಬಿಸಿಬಿಸಿ ಕಲ್ಪನೆಗಳನ್ನು ಹಿಡಿದುಕೊಂಡು ಬಂದರು. ನಾಡಿಗೆ ಬಂದ ಮೇಲೆ ಅವರು ಅವುಗಳ ಪ್ರಯೋಜನವನ್ನು ಹೇಗೆ ಮಾಡಿದರೆಂಬುದನ್ನು ಮುಂದಿನ ಚರಿತ್ರೆಯಿಂದ ತಿಳಿದುಕೊಳ್ಳಬಹುದು.

---

## ಸ್ವಾತಂತ್ರ್ಯ ಸಂಘ

ಬ್ರುಸೆಲ್ಸ್ ಕೊಂಗ್ರೆಸಿನಿಂದ ಅವರಿಗೆ ಅನೇಕ ವಿಪನ್ನ ರಾಷ್ಟ್ರಗಳ ಪ್ರತಿನಿಧಿಗಳ ಪರಿಚಯುವಾಯಿತು. ಧನದೌಲತ್ತಿನ ಸದವಡೆಯಲ್ಲಿ ನುಗ್ಗುನುರಿಯಾದ ದುಡಿಮೆಗಾರರ ಕೇಡನ್ನು ಅವರು ಕಣ್ಣಾರೆ ಕಂಡರು. ಪ್ರಪಂಚಯುದ್ಧದಲ್ಲಿ ಸಾಮ್ರಾಜ್ಯವಾದಿಗಳು ಆಡಿದ ಆಟಮಾಟಗಳನ್ನೂ ಕೈಚಳಕವನ್ನೂ ಪ್ರತ್ಯಕ್ಷ ಪರಾಮರ್ಶಿಸಿ ನೋಡಿದರು. ಬರೀ ಭಾರತವೇ ಏಕೆ, ಪ್ರಪಂಚದ ಪರತಂತ್ರ ರಾಷ್ಟ್ರಗಳೆಲ್ಲವೂ ಬಿಡುಗಡೆಯನ್ನು ಪಡೆಯಬೇಕಾದರೆ ಮೊದಲು ಸಾಮ್ರಾಜ್ಯಮದವನ್ನು ಆರ್ಥಿಕ ಆಪತ್ತುಗಳಿಗೀಡುಮಾಡಿ ಹಣಿದು ಮಣಿಸಬೇಕೆಂದೆಣಿಸಿದರು.

ಚೀನದೇಶದಲ್ಲಾದ ಅಭಿನವ ಕ್ರಾಂತಿ, ಇಂಡೋನೇಶಿಯಾದಲ್ಲಿ ನಡೆಯುವ ಸ್ವಾತಂತ್ರ್ಯಸಂಗ್ರಾಮ, ಇಜಿಪ್ತದೇಶದ ಸ್ವಾತಂತ್ರ್ಯಯುದ್ಧ ಇವುಗಳನ್ನು ಯಾರು ನಡೆಸುತ್ತಿರುವರು? ರಾಷ್ಟ್ರದ ಭಾವೀ ವೈಭವವನ್ನು ಣ್ಣುವವರು ಯಾರು? ಈಗಿನ ಹುಡುಗರೂ ತರುಣರೂ ಅಲ್ಲವೇ? ಅಂದಮೇಲೆ ಈ ವರ್ಗದವರಿಗೆ ಸ್ವಾತಂತ್ರ್ಯದ ಹಸಿವೆಯಾಗದ ಹೊರತು ಯಾವ ಹೋರಾಟದಿಂದಲೂ ಹೆಚ್ಚಿನ ಉಪಯೋಗವಾಗುವುದಿಲ್ಲೆಂದು ನಿಶ್ಚಿತವಾಗಿ ತಿಳಿದುಕೊಂಡರು. ಮೇಲೆ ಹೇಳಿದ ಎಲ್ಲ ರಾಷ್ಟ್ರಗಳಲ್ಲಿಯೂ ಕಾಳಗದಲ್ಲಿ ಶೆಡ್ಡುಹೊಡೆದು ನಿಂತವರು ತರುಣರೇ ಆಗಿರುವರು. ಈ ವಿಷಯುಗಳೆಲ್ಲ ಜವಾಹರಲಾಲರಿಗೆ ಮನದಟ್ಟಾಗಿ ಹೋಗಿದ್ದವು. ಅವರು ವಿದೇಶದಿಂದ ಮರಳಿ ಬಂದಾಗ ಮದ್ರಾಸಿನ ಕೊಂಗ್ರೆಸ್ ಇತ್ತು. ಅದರಲ್ಲಿ ತಮ್ಮ ಕೈಮೀರಿ ಯತ್ನಪಟ್ಟು ರಾಷ್ಟ್ರೀಯಸಭೆಯ ಅನೇಕ ಸಭಿಕರಿಗೆ ತಮ್ಮ ತಳಮಳವನ್ನು ತಿಳಿಸಿ ಎಲ್ಲರಿಗೂ ಸ್ವಾತಂತ್ರ್ಯದ ಹಂಬಲ

ವನ್ನು ತಾಳುವಂತೆ ಬೋಧಿಸಿದರು. ಮತ್ತು ಕೊಂಗ್ರೆಸಿನೆದುರಿಗೆ ಸ್ವಾತಂತ್ರ್ಯದ ಆದರ್ಶವನ್ನಿಟ್ಟರು. ಇದನ್ನು ಕಂಡು ಬಹು ಜನರು "ಭಳಿರೇ, ಭಾಪು! ಬಿಂಕದಿಂದ ಬೀಗಿಹೋದ ಸಾಮ್ರಾಜ್ಯಶೂರರೆದೆಯನ್ನು ನಡುಗಿಸಬೇಕಾದರೆ ಸ್ವಾತಂತ್ರ್ಯದ ಗುಡುಗೇ ಸಿದ್ಧೌಷಧವೆನ್ನಹತ್ತಿದರು". ಇದಕ್ಕೆಲ್ಲ ಕಾರಣಗಳಿವೆ. ನಮ್ಮ ಬಿಡುಗಡೆಯ ಬವರದಲ್ಲಿ ನಮಗೆ ವಿರೋಧಪಕ್ಷದವರಿಂದಲೂ ನಿಸ್ಸೀಮ ನೆರವಾಗಿದೆ. ಪಂಜಾಬದ ಪೀಡೆಗಳನ್ನು ನಡೆಸಿದ ಡಾಯರ್ ಒಡ್ವಾಯರರ ಉಪಕಾರವನ್ನು ನಾವು ಮರೆಯುವಂತಿಲ್ಲ. ಅವರ ಕ್ರೂರಕೃತ್ಯಗಳೇ ನಮ್ಮ ಕಣ್ದೆರೆದವು. ನಿದ್ರಿತವಾದ ರಾಷ್ಟ್ರಕ್ಕೆ ಆಯಕಟ್ಟಿಗೆ ಹೊಡೆದು ಅಡಬಡಿಸಿ ಎಳುವಂತೆ ಮಾಡಿದ ಸರ್ವ ಶ್ರೇಯಸ್ಸು ಅವರಿಗೇ ಸಲ್ಲತಕ್ಕದ್ದು. ತಮ್ಮ ಸೊಕ್ಕಿನ ಸೆಡವಿನಲ್ಲಿ ಅಂಕೆತಪ್ಪಿ ನಡೆದು ಅತ್ಯಾಚಾರಗಳಿಂದ ನಾಡಿನ ಮಾನದ ಕೆಚ್ಚಿಗೆ ಕಿಚ್ಚೆನ್ನುವಂತೆ ಕುಟ್ಟಿ ತರುಣರ ತಲೆಯನ್ನು ತಿರುಗಿಸಿ ಅವರ ರಟ್ಟೆಯ ರೊಚ್ಚನ್ನು ತುರಿಸಿದವರು ಅವರಿಬ್ಬರು! ಮುಂದೆ ೧೯೨೪ ರಲ್ಲಿ ನಾಡಿನ ಬಿಡುಗಡೆಯ ಹೆಜ್ಜೆಗಳನ್ನು ಬಣ್ಣಿಸಿ ರಾಷ್ಟ್ರದ ಮಾನಗೇಡಿತನವನ್ನು ಇನ್ನಷ್ಟು ಮೆರವಣಿಗೆಗೆ ಇಟ್ಟವರೆಂದರೆ ಸರ್ ಮಾಲಕಮ್ ಹೇಲಿಗಳು. ಇವರ ವಿಧಾನಗಳು ಮಂದಪಕ್ಷದವರ ಪಿತ್ತವನ್ನು ಸಹ ಕೆದರಿಸಿದವು. ಇತ್ತ ಆಗಾಗ್ಗೆ ಸೆರೆಮನೆಯನ್ನು ಕಂಡು ಕಷ್ಟಗಳನ್ನುಣ್ಣುತ್ತಿದ್ದವರು ಒಳಗಿಂದೊಳಗೇ ಆಲೋಚಿಸಹತ್ತಿದರು. ತಾವು ತಾಪಬಟ್ಟು ಬಳಲುವುದೆಂತೂ ಬಿಟ್ಟಿದ್ದಲ್ಲ. ಅಂದಬಳಿಕ ಅರ್ಥವಿಲ್ಲದ ಸಾಮಾನ್ಯ ಧ್ಯೇಯಕ್ಕಾಗಿ ಸವೆಯುವುದಕ್ಕಿಂತ ಹೆಚ್ಚು ಹುರುಪನ್ನು ಕೊಡುವ, ಅತ್ಯಂತಾಭಿಮಾನದಾಯಕವಾದ ಉಚ್ಚ ಸ್ವಾತಂತ್ರ್ಯಾದರ್ಶವನ್ನೇ ಇಟ್ಟುಕೊಂಡು ಅದಕ್ಕಾಗಿ ದೇಹವನ್ನು ದಂಡಿಸುವುದು ಮೇಲೆಂದು ಬಗೆಯ ಹತ್ತಿದರು. ಇಂಥ ತೃಪ್ತಿಗೆಟ್ಟ ತರುಣರೂ ಸಂತೋಷವಳಿದ ಸಭಿಕರೂ ಜವಾಹರಲಾಲರ ಸ್ವಾತಂತ್ರ್ಯ ಧ್ಯೇಯಕ್ಕೆ ಬೆಂಬಲವನ್ನಿತ್ತರು. ಲಾರ್ಡ ಬರ್ಕನ್‌ಹೆಡ್ಡರ ಬಡಾಯಿಯಿಂದ ಬೆದರದೆ ಜವಾಹರಲಾಲರು ಸ್ವಾತಂತ್ರ್ಯದ ನಾಡಗುಡಿಯನ್ನೇರಿಸಿದರು. ದೇಶದ ಮುಂದಾಳುಗಳಲ್ಲಿ ಪಂಡಿತ ಮದನಮೋಹನ ಮಾಲವೀಯ ಮತ್ತು ಆನಿಬೆಜಂಟಮ್ಮನವರಂಥವರು ಸಹ ಈ ಸ್ವಾತಂತ್ರ್ಯದ ಕೂಗಿಗೆ ದನಿಗೂಡಿಸಿದರು. ಜವಾಹರಲಾಲರು ಸ್ವಾತಂತ್ರ್ಯವಾದಿಗಳಾಗುವ ಒಳಗಿನ ಒತ್ತಾಯವೇ ಬೇರೆ ತರಹದ್ದು. ತಮ್ಮ ಐರೋಪ್ಯ ಪ್ರವಾಸದಲ್ಲಿ ಅವರಿಗೆ ಕೆಲವು ಮಾತುಗಳು ಮನದಟ್ಟಾಗಿ

ಹೋಗಿದ್ದವು. ಹಿಂದುಸ್ಥಾನದ ಹೊರಗಿನ ನಮ್ಮ ಸಹಾನುಭೂತಿಯವರಿಗೆ ನಮ್ಮ ಆಕ್ರೋಶದ ಅರ್ಥವೇ ಆಗುವುದಿಲ್ಲ. “ಹೋಂ ರೂಲ., ಹೊಣೆಗಾರಿಕೆಯು ಸರಕಾರ, ಒಕ್ಕಲುನಾಡಿನ ಸ್ವರಾಜ್ಯ” ಈ ಮಾತುಗಳ ಅರ್ಥವೇ ಅವರಿಗಾಗುವುದಿಲ್ಲ ! ಏಕೆಂದರೆ ಅವುಗಳಿಂದ ಅವರು, ಭಾರತಕ್ಕೆ ಬಲವಾದ ಮಧ್ಯವರ್ತಿ ಪ್ರಭುತ್ವದ ಕೆಳಗೆ ಒಂದು ಪ್ರಾಂತೀಯ ಸ್ವಾತಂತ್ರ್ಯವಿದ್ದಂತೆ, ಯಾವುದೋ ಒಂದು ನಮೂನೆಯ ಸರಕಾರ ಪದ್ಧತಿಯು ಬೇಕೆಂದು, ಲೆಕ್ಕ ಹಾಕುತ್ತಾರೆ. ಈ ಮಾತಿನ ನಿಜತ್ವವು, ನಮ್ಮ ನಾಡು ಸ್ವಾತಂತ್ರ್ಯದರ್ಶವನ್ನು ಸಾರಿದ ಕೂಡಲೆ ಬ್ರಿಟಿಷರು ತಮ್ಮ ದೃಷ್ಟಿಕೋನವನ್ನು ಬದಲಿಸಿದರ ಮೇಲಿಂದ ಹೊಳೆದು ಹೋಯಿತು. ಮತ್ತು ಹೀಗಿರುವುದು ಸ್ವಾಭಾವಿಕ.

ಸರಕಾರದವರೊಡನೆ ಸಹಕಾರದ ಬಗ್ಗೆ ಮಾತನಾಡಿರಿ; ಅವರು ಕೂಲಿಯಾಳುಗಳಿಗೆ ಜಬಾಬು ಕೊಟ್ಟಂತೆ ಪ್ರಭುತ್ವದ ಪ್ರಭಾವದಿಂದ ಉತ್ತರ ಕೊಡುವರು. ಅಸಹಕಾರವನ್ನು ಸಾರಿರಿ; ಸಹಕಾರದ ಬಗ್ಗೆ ಮಾತನಾಡುವರು. ಅಹಿಂಸೆಯೇ ನಮ್ಮ ಆಯುಧವೆಂದು ಹೇಳಿರಿ; ಸೆರೆಮನೆಯ ಕದವನ್ನು ತೆರೆಯುವರು. ಹಿಂಸೆಯನ್ನು ಪ್ರತಿಪಾದಿಸಿದರೆ ಅವರು ಅಸಹಕಾರದವರನ್ನು ಪರಮಮಿತ್ರರೆಂದು ಕಾಣುವರು. ಸಾಮಂತ ಸ್ವರಾಜ್ಯವೆನ್ನಿರಿ; ಅವರು ಕೂಡಲೆ ಶೀಮಾ ಬದ್ಧವಾದ ಹೊಣೆಗಾರಿಕೆಯ ಸರಕಾರದ ಮಾತೆತ್ತುವರು. ಸ್ವಾತಂತ್ರ್ಯದ ಗುಡುಗು ಹಾಕಿರಿ; ಕೂಡಲೆ ಎದೆಗುಕ್ಕು ಹುಟ್ಟಿ ಸಾಮಂತ ಸ್ವರಾಜ್ಯದ ಪ್ರಸ್ತಾಪ ತೆಗೆಯುವರು. ಎಲ್ಲವೂ ನಮ್ಮ ಆದರ್ಶವನ್ನು ಅರಿತುಕೊಳ್ಳುವುದರಲ್ಲಿದೆ. ಕಾಯಕ್ಲೇಶಗಳೂ ಬರಗಾಲಬವಣೆಗಳೂ ಲಾಟಿಯ ಏಟುಗಳೂ ನಮ್ಮನ್ನು ಎಂದೂ ಬಿಟ್ಟವುಗಳಲ್ಲ. ಯಾವುದೇ ಪ್ರಕಾರದ ಸ್ವರಾಜ್ಯಕ್ಕಾದರೂ ನಾವು ಕೊಡಬೇಕಾದ ಕ್ರಮುವೊಂದೇ. ಅಂದಬಳಿಕ ಭಾರತದ ಘನತೆಗೆ ಅನುಸರಿಸಿಯೇ, ಜಗತ್ತಿನಲ್ಲಿ ಹಿಂದಿನಿಂದಲೂ ನಮಗಿದ್ದ ಸ್ಥಾನಮಾನಗಳನ್ನು ನೋಡಿಯೇ ಅತ್ಯುಚ್ಚವಾದ ಆದರ್ಶವನ್ನೇ ಏಕೆ ಸಂಕಲ್ಪಿಸಬಾರದು ? ಮುಂದೆ ಸ್ವಾತಂತ್ರ್ಯವು ಸೆರಗಿನಲ್ಲಿ ಬಿದ್ದ ಮೇಲೆ ಅಥವಾ ಅದನ್ನು ಸೆಳಕೊಂಡ ಮೇಲೆ, ವಿಶ್ವಬಂಧುತ್ವದ ವಿಶಾಲ ವಿರಾಟ ಕಲ್ಪನೆಗಾಗಿ ಬೇಕಾದರೆ ಶೂರ ಸತ್ಯಸಂಧ ರಾಷ್ಟ್ರಗಳ ಮಿತ್ರಮಂಡಲಗಳನ್ನುಂಟುಮಾಡಿ ಅದರಲ್ಲಿ ನಾವೂ ಸೇರುವಾ. ರಾಷ್ಟ್ರಸಂಘಗಳನ್ನು ಮಾಡಿ ವಿಶ್ವವ್ಯಾಪಕವಾಗಿ

ಕಲ್ಯಾಣವನ್ನುಂಟುಮಾಡುವಾ. ಆದರೆ ಈಗ ಧ್ಯೇಯವನ್ನೇ ಕೆಳಗೆ ದಬ್ಬುವುದರಲ್ಲಿ ನಮ್ಮ ಹೃದಯದೌರ್ಬಲ್ಯವನ್ನೇಕೆ ತೋರಬೇಕು ? ನಾವು ಪೇಟೆಯಲ್ಲಿ ಸಂತೆ ಮಾಡಲಿಕ್ಕೆ ಹೋದಾಗ್ಗ ಯಾವವಾದರೂ ಹಣ್ಣುಹಂಪಲಗಳನ್ನು ಮಾರಾಟಕ್ಕಿಟ್ಟಿದ್ದರೆಂದೆಣಿಸುವಾ. ಎಲ್ಲ ಹಣ್ಣುಗಳಿಗೂ ಕ್ರಯವು ಒಂದೇಯಾದರೆ, ನಾವು ಹುಡುಕಿ ಅತ್ಯುತ್ತಮವಾದ ಹಣ್ಣನ್ನೇ ತೆಗೆದುಕೊಳ್ಳುವುದಿಲ್ಲವೋ ? ಅದರಂತೆ ಸರಕಾರದ ದಬ್ಬಾಳಿಕೆಯು ದವಡೆಗೊಳಗಾಗಿಯೇ ಯಾವುದಾದರೂ ಕಲ್ಯಾಣಕರ ಸ್ಥಿತಿಯನ್ನು ಹೊಂದುವುದು ಹೌದಾದರೆ ಅದರಲ್ಲಿ ನಾವು ಸ್ವಾತಂತ್ರ್ಯವೆಂಬ ಶ್ರೇಷ್ಠಪದವನ್ನೇ ಏಕೆ ಹಾರೈಸಬಾರದು ? ನಮ್ಮ ತರುಣ ನಾಯಕರು ಇದೇ ಅರ್ಥದ ಪ್ರಶ್ನೆಯನ್ನೇ ಎಲ್ಲ ಮುಂದಾಳುಗಳಿಗೂ ಹಾಕುವರು. ಮೊದಲೆತ್ತಿಕೊಳ್ಳುತ್ತ ಎಲ್ಲರೂ ಒಪ್ಪದಿದ್ದರೂ ಬರಬರುತ್ತ ಜವಾಹರಲಾಲರ ಮಾತಿನ ಸತ್ಯತೆಯನ್ನು ಚೆನ್ನಾಗಿ ತಿಳಿದು ಇಡೀ ನಾಡೇ ಸ್ವಾತಂತ್ರ್ಯವೇ ಕೊಂಗ್ರೆಸಿನ ಧ್ಯೇಯವಾಗಿರಬೇಕೆಂದು ಒಮ್ಮತದಿಂದ ಸಮ್ಮತಿಸಿತು.

ಎಲ್ಲರ ಸಮ್ಮತಿಯನ್ನೂ ಸ್ವಾತಂತ್ರ್ಯದರ್ಶನಕ್ಕೆ ಎಳೆದು ತರಬೇಕಾದರೆ ಜವಾಹರಲಾಲರು ಬಹು ಕಷ್ಟಪಟ್ಟಿರುವರು. ಅವರು ಸ್ವಾತಂತ್ರ್ಯ ಸಂಘವನ್ನು ಸ್ಥಾಪಿಸಿ ಕೊಂಗ್ರೆಸಿನೊಳಗೇ ನಿಂತು ಅದನ್ನು ತಮ್ಮ ಮತಕ್ಕೆ ಮಣಿಸುವಂತೆ ಹೆಣಗಾಡಿದರು. ಸ್ವಾತಂತ್ರ್ಯ ಸಂಘದ ಚಳವಳವು ಜಯಶೀಲವಾಗಬೇಕಾದರೆ ನಾಡಿನ ತುಂಬೆಲ್ಲ ಹಬ್ಬಿದ್ದ ತರುಣರ ತಂಡಗಳಿಂದ ಬಹಳ ಉಪಯೋಗವಾಯಿತು. ಈ ಯುವಕ ಸಂಘಗಳನ್ನು ಜವಾಹರಲಾಲರು ಹೇಗೆ ಹೊರಡಿಸಿದರೆಂಬುದನ್ನು ಮುಂದಿನ ಪ್ರಕರಣದಲ್ಲಿ ವಿವರಿಸಲಾಗುವುದು.

---

## ಯುವಕ ಸಂಘ

ಅಸಹಕಾರದ ತೀವ್ರತೆಯು ತಂಗಿದೊಡನೆ ದೇಶದಲ್ಲಿ ಅಲ್ಲಲ್ಲಿ ತರುಣ ಸಂಘಗಳು ಉದಯವಾದವು. ಇದು ಅತ್ಯಂತ ಆಶಾಜನಕವಾದ ಸಂಗತಿಯು. ಈ ತರುಣರ ಚಟುವಟಿಕೆಗಳಿಗೆ ಕಳೆಯೇರಲು ಮುಖ್ಯವಾಗಿ ಎರಡು ಕಾರಣಗಳಾದವು. ಒಂದು ನಾಡಿನಲ್ಲಿ ನಡೆದ ಜಾತಿ ಜಗಳದ ರಗಳೆ, ಎರಡನೇದು ಪ್ರಪಂಚ ಯುದ್ಧದ ಪರಿಣಾಮ.

ಘನಘೋರವಾದ ಯುದ್ಧದಿಂದ ಹಿಂದುಸ್ಥಾನ ಮತ್ತು ಬೇರೆ ಮುಂದು ವರಿದ ರಾಷ್ಟ್ರಗಳ ತರುಣರ ಕಣ್ತೆರೆದವು! ಯುರೋಪಖಂಡದಷ್ಟು ಹೆಚ್ಚಾಗಿ ಹಿಂದುಸ್ಥಾನವು ಹೈರಾಣಾಗದಿದ್ದರೂ ಯುದ್ಧದಿಂದ ಭಾರತಕ್ಕೆ ಕಠಿಣವಾದ ಕಷ್ಟ ವಾಯಿತೆಂದು ಧಾರಾಳವಾಗಿ ಹೇಳಬಹುದು.

ಕೆಲವು ವರ್ಷಗಳ ನಂತರ ಬದಲಾದ ಸ್ಥಿತಿಗತಿಗಳ ಮೇಲಿಂದ ಒಂದು ಮಾತು ಸ್ಪಷ್ಟವಾಯಿತು. ಭಾರತವು ಬ್ರಿಟಿಷರಿಗೆ ಪ್ರಪಂಚಯುದ್ಧದಲ್ಲಿ ಬೆಂಬ ಲಕ್ಕೆ ನಿಂತದ್ದು ತೀರ ತಪ್ಪಾಯಿತೆಂಬದು ತಿಳಿಯಿತು. ಏಕೆಂದರೆ ಅದರಿಂದ ನಮ್ಮ ಸಂಕೋಲೆಗಳು ಹೆಚ್ಚು ಗಟ್ಟಿಮುಟ್ಟಿಯಾಗಿ ಬಿಗಿಯಾದವಲ್ಲದೆ ಸಡಿಲಾಗ ಲಿಲ್ಲ. ಗೆಲುವಿನಿಂದ ಮೈಮರೆತ ರಾಷ್ಟ್ರಗಳು ಸೊಕ್ಕಿನಿಂದ ಕಣ್ಣು ಕಾಣದೆ ವಿಪ ರೀತ ವರ್ತನಗಳನ್ನು ನಡೆಸತೊಡಗಿದವು. ವೈರಿಗಳನ್ನು ನುಚ್ಚುನುರಿಮಾಡಿ ಮುರಿ ಬಡಿದದ್ದರಿಂದ ಅವರಿಗೆ ಮೂರು ಲೋಕದಲ್ಲಿ ಕೈಹಿಡಿದು ಕೇಳುವವರೇ ಇಲ್ಲೆಂದು ಅವರು ಬಿಂಕದಿಂದ ಬಿಗಿದರು. ಸೋತವರಿಗಂತೂ ಸುಣ್ಣಮಣ್ಣುಗಳನ್ನು ತಿನ್ನಿ ಸುವುದು ಕ್ರಮಪ್ರಾಪ್ತವೇ ಆಯಿತು. ಆದರೆ ಈ ಸಾಮ್ರಾಜ್ಯಮದದ ಉರ ವಣಿಯು ಮೇರೆಮೀರಿ ಬೆಳೆಯಲಾರಂಭಿಸಿತು.

ತರುಣರ ಚಳವಳಕ್ಕೆ ಬಹಳ ಸಹಾಯಕವಾದ ಇನ್ನೊಂದು ಕಾರಣ ವೆಂದರೆ ಜಾತಿ ಜಗಳ. ಮಹಾತ್ಮಾ ಗಾಂಧಿಯವರು ತಮ್ಮ ಚಳವಳವನ್ನು ಜಾತಿ ಮತಗಳ ಪರಸ್ಪರ ಪ್ರೇಮವೆಂಬ ಅಡಿಗಲ್ಲಿನ ಮೇಲೆ ಕಟ್ಟಿದ್ದರು. ಅವರ ಚಳ ವಳವು ಹಿಂದು ಮುಸಲ್ಮಾನರ ವೈಷಮ್ಯವೆಂಬ ದೊಡ್ಡ ಬಂಡೆಗೆ ಅಪ್ಪಳಿಸಿತು. ಕಟ್ಟಡದ ಬುನಾದಿಯು ಅದುರಿತು. ನಾಡು ಬೆದರಿತು. ದೇಶದಲ್ಲಿ ಅಲ್ಲಲ್ಲಿ ಕಲಹ ಸನ್ನಾಹಗಳಾಗಿ ದೊಂಬಿಗಳಾದವು. ಅಲ್ಲೀ ಬಂಧುಗಳೂ ಮಹಾತ್ಮರೂ ದೂರ ದೂರವಾದರು. ಮಹಾತ್ಮರು ಅತ್ಯಂತ ಆತ್ಮವಿಶ್ವಾಸದಿಂದಲೂ ನಿರ್ಮಲ ಮನ ದಿಂದಲೂ ಜಾತಿಮತಗಳ ಪರಸ್ಪರ ಪ್ರೇಮದ ಬುನಾದಿಯ ಮೇಲೆ ರಾಷ್ಟ್ರನಿರ್ಮಾಣ ವಾಗುವದು ಶಕ್ಯವೆಂದು ತಿಳಿದಿದ್ದರೂ ಬರಬರುತ್ತ ಚಳವಳದ ಕಸುವು ಕಡಿಮೆ ಯಾದಂತೆ, ಇದಕ್ಕೂ ಭಿನ್ನವಾದ ಬೇರೆ ತಳಹದಿಯನ್ನು ಹಾಕಬೇಕೆಂದೂ ಐಕ್ಯದ ಘೋಷದ ಆಘಾತವು ಮತಗಳ ಹೆಸರುಗಳಿಗಿಂತಲೂ ಉನ್ನತಸ್ಥಾನದಲ್ಲೆಲ್ಲಿಯೋ ಬೀಳಬೇಕೆಂದೂ ಸ್ಪಷ್ಟವಾಯಿತು! ಆದ್ದರಿಂದಲೇ ಇತ್ತೀಚೆಗೆ "ಹಿಂದೂ ಮುಸಲ್ಮಾನಕೀ ಜೈ" ಎಂಬ ಘೋಷವು ಸ್ವಲ್ಪ ಅಡಗಿದಂತೆ ಕಾಣುತ್ತದೆ.

ರಾಜಕಾರಣದಲ್ಲಿ ಧರ್ಮದ ತಳಹದಿಯ ಮೇಲೆ ಒಕ್ಕಟ್ಟಾಗುವುದು ಅಸಂಭವವೆಂದೇ ಹೇಳಬೇಕು. ಪ್ರತಿಯೊಬ್ಬನಿಗೂ ಪರಧರ್ಮವು ಭಯಾವಹವೇ. ಅವನದವನಿಗೇ ಮುದ್ದು. ಅದರಲ್ಲಿಯೂ ತಮ್ಮೊಳಗೇ ತಾಳಮೇಳವಿಲ್ಲದ ಮತ್ತು ಪರಸ್ಪರ ವಿರೋಧಿಗಳೆಂದು ಗಣಿಸಲ್ಪಟ್ಟ ಅನೇಕ ಧರ್ಮಗಳಿರುವ ನಾಡಿನಲ್ಲಿ ಇದೆಲ್ಲ ಅಸಾಧ್ಯವೇ ಸರಿ. ಏಕಂದರೆ ಯಾವುದರಲ್ಲಿ ಮನುಷ್ಯನಿಗೆ ನೆಚ್ಚುನಂಬಿಗೆಗಳುಂಟೋ ಅದೇ ಅವನ ಧರ್ಮ. ಹೆರವರು ಅವನನ್ನು ಅದರಿಂದ ಪ್ರತ್ಯೇಕಿಸಲಾರರು. ವಿಧರ್ಮೀಯರಿಗೂ ತೀರ ಅಶಕ್ಯ! ಸಣ್ಣಪುಟ್ಟ ಸಿಳ್ಳೀಮಿಳ್ಳೀ ಸಂಗತಿಗಳನ್ನು ತಿರ್ಮಾನಿಸಲಿಕ್ಕೂ ತಿಳಿಯಲಿಕ್ಕೂ ಹುಳಿತುಹೋದ ಹಳೇ ಕಂತೆ ಪುರಾಣಗಳೆಂದ ಮೇಲೆ ಕೆಲಸವು ಮತ್ತಷ್ಟು ಕಠಿಣವೂ ಅವ್ಯವಹಾರ್ಯವೂ ಆಗಲಿಲ್ಲವೇ? ಸಾಮಾನ್ಯವಾದ ನಿತ್ಯದ ಒಡನಾಟಗಳ ಬಗ್ಗೆಯೂ ಧಾರ್ಮಿಕ ಪ್ರತಿಬಂಧಗಳು ದಂಡಗಳನ್ನೆತ್ತಿ ನಿಲ್ಲುತ್ತಿದ್ದರೆ ಮುಂದೇನು ಮಾಡಬೇಕು?

ಈ ಧಾರ್ಮಿಕ ಐಕ್ಯದ ತಳಹದಿಯ ಮೇಲೆ ಮುಗ್ಗಿದ ಚಳವಳವು ಅಸಹಕಾರವೊಂದೇ ಅಲ್ಲ. ಸ್ವರಾಜ್ಯ ಪಾರ್ಟಿಯ ಆಳಿಕೆಯೂ ಇದೇ ಬುನಾದಿಯ ಮೇಲೆ ನಿಂತಿತ್ತು; ಅವರು ಪ್ರಾರಂಭದಲ್ಲಿ "ಕೊಂಗ್ರೆಸ್–ಖಿಲಾಫತ–ಸ್ವರಾಜ್ಯ ಪಾರ್ಟಿ" ಎಂಬ ಬಿರುದನ್ನಿಟ್ಟು ಹೊರಟರು. ಅವರದೂ ಇದೇ ಪಾಡಾಗುತ್ತಿತ್ತು. ಆದರೆ ಅದರ ಸೂತ್ರಧಾರರಾದ ಮೋತಿಲಾಲರು ರಾಜಕಾರಣದ ಪಗಡೆಯಾಟದಲ್ಲಿ ಪಟುಗಳಾಗಿದ್ದರಿಂದ ಕಾಲಕಾಲಕ್ಕೆ ಹೊತ್ತುಬಂದಂತೆ ನಡೆದು ತಮ್ಮ ಹಿಡಿತವನ್ನು ಬಿಡಲಿಲ್ಲ. ಆದರೆ ಈ ನಿಶ್ಚಿತ ನಿಲುವು ಇಲ್ಲದ ಸ್ಥಿತಿಯು ಎಷ್ಟು ದಿನ ನಡೆದೀತು? ಅವರೂ ಹೈರಾಣಾಗಿ ಕೈಯೂರಿದರು!

ಇದರ ಮೇಲಿಂದ ನಿಚ್ಚಳವಾಗಿ ತಿಳಿಯುವುದೇನಂದರೆ ದೇಶದ ಕಲ್ಯಾಣವಾಗಬೇಕಾದರೆ ಜಾತಿಮತಗಳ ಕಲಹಗಳನ್ನು ಕೆಣಕಿಸುವ ಈ ಧರ್ಮಗಳ ವಿಚಿತ್ರ ಸ್ವರೂಪವನ್ನು ವಿರೋಧಿಸುವ ಒಂದು ಸ್ವತಂತ್ರ ಸಂಘವೇ ಅವಶ್ಯವೆಂದಾಯಿತು. ಈ ಕಾರ್ಯವನ್ನು ಕೊಂಗ್ರೆಸಿಗೆ ಕೈಕೊಳ್ಳಲು ಬಾರದು. ಏಕೆಂದರೆ ಅದರ ಅಸ್ತಿತ್ವವು ಸಭಿಕರ ಸಂಖ್ಯೆಯನ್ನೂ ಅನೇಕ ಜಾತಿಗಳ ಪ್ರೇಮದ ಸಹಕಾರವನ್ನೂ ಅವಲಂಬಿಸಿರುತ್ತದೆ. ಈ ಮಹತ್ತ್ವದ ಕೆಲಸವು ಕೆಚ್ಚೆದೆಯ ತರುಣರಿಂದಲೇ ಸಾಧ್ಯವೆಂದು ನಮ್ಮ ನಾಯಕರಿಗೆನಿಸಿತು. ಏಕೆಂದರೆ ಕಾರ್ಯದ

ನೆಲೆಬೆಲೆಗಳನ್ನರಿತು ಕೇಡುಕಷ್ಟಗಳನ್ನು ತಿಳಿದು ಯಾವುದಕ್ಕೂ ಹಿಮ್ಮೆಟ್ಟದೆ ಎದೆಗಾರಿಕೆಯಿಂದ ಆದರ್ಶವನ್ನೆತ್ತಿ ಹಿಡಿಯಲು ಯುವಕರೇ ಬಾಧ್ಯರೆಂದು ಅವರು ತಿಳಿದರು. ಮುಂದಾಳುಗಳಿಗೆ ಸಹ ರಾಷ್ಟ್ರೀಯತ್ವದ ಮೂಲಪಾಠಗಳನ್ನು ಕಲಿಸಬೇಕಾದರೆ ಅದೆಂಥ ಉತ್ಸಾಹವೂ ಉದ್ಬೋಧನಕೌಶಲ್ಯವೂ ಬೇಕೆಂಬುದು ಸ್ಪಷ್ಟವಿದೆ !

ತರುಣರು ತಯಾರಾಗದೆ ಯಾವ ಕೆಲಸವೂ ನಡೆಯದೆಂದು ಮನವರಿಕೆಯಾದ ಮೇಲೆ ಜವಾಹರಲಾಲರು ಸರ್ವ ಭಾರವನ್ನು ಯುವಕರ ಹೆಗಲಮೇಲೆಯೇ ಹಾಕಿದರು. ಹರೆಯದವರಲ್ಲಿ ಹುರುಪು ಹುಟ್ಟಿಸಿ ತಾನು ಹುರಿಯಾಳಾಗಿ ನಿಂತು ಸೆಡ್ಡು ಹೊಡೆದರು. ತರುಣರ ತಂಡಗಳನ್ನು ಕೂಡಿಸಿ ಅವರಲ್ಲಿದ್ದ ಚೈತನ್ಯವನ್ನು ಚಮಕಿಸಿ ಕಾರ್ಯಭೂಮಿಯಲ್ಲಿ ಅದನ್ನು ಜಗಜಗಿಸುವಂತೆ ಮಾಡಬೇಕಾದರೆ ಜವಾಹರಲಾಲರೇ ಸೈ. ಅವರು ಕೆಲವು ವರ್ಷಗಳಿಂದಲೂ ಹಿಂದುಸ್ಥಾನೀ ಸೇವಾದಲಕ್ಕೆ ಅಧ್ಯಕ್ಷರಾಗಿಯೇ ಇದ್ದರು. ಆದರೆ ಸೇವಾದಲಕ್ಕಿಂತಲೂ ಹೆಚ್ಚು ವ್ಯಾಪಕವಾದ ಕ್ಷೇತ್ರವನ್ನಿಟ್ಟು ವಿಶಾಲವಾದ ಪ್ರಮಾಣದಲ್ಲಿ ಕೆಲಸಮಾಡದಿದ್ದರೆ ಚಳವಳವು ಜೋರಿನಿಂದ ಜರಗುವುದಿಲ್ಲೆಂದು ತಿಳಿದು ತಕ್ಷಣವೇ ಯುವಕ ಸಂಘಗಳನ್ನು ಸ್ಥಾಪಿಸಲು ಪ್ರಾರಂಭಿಸಿದರು. ಇಂದು ನಾಡಿನ ತುಂಬ ಯುವಕ ಸಂಘಗಳಿದ್ದು ಅವುಗಳ ಮಹತ್ತ್ವವೂ ಉಪಕಾರವೂ ಕೊಂಗ್ರೆಸಿಗೆ ಬಹಳ ಅನಿಸುತ್ತಿದೆ.

ಬೇರೆ ರಾಷ್ಟ್ರಗಳಿಗೂ ಹಿಂದುಸ್ಥಾನಕ್ಕೂ ಒಂದು ವಿಶೇಷ ಅಂತರವಿದೆ. ಹಿಂದುಸ್ಥಾನದಲ್ಲಿ ಏಕರಾಷ್ಟ್ರೀಯತ್ವದ ಕಲ್ಪನೆಯು ಉದಯವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಆದರೆ ದುರ್ದೈವದಿಂದ ಅದೆಷ್ಟು ಫಲೋದರ್ಕವಾಗಬೇಕೋ ಅಷ್ಟಾಗಿಲ್ಲ. ನಮ್ಮನಮ್ಮೊಳಗಿನ ಧರ್ಮಭೇದವೇ ಇದಕ್ಕೆಲ್ಲ ಮೂಲಕಾರಣವೆಂದು ಮೇಲೆಯೇ ಹೇಳಲಾಗಿದೆ. ಈ ಅವಸ್ಥೆಯಲ್ಲಿ ಯಾವ ದೇಶಕಲ್ಯಾಣದ ಕಾರ್ಯವನ್ನೂ ಏಕಮುಖದಿಂದ ಮಾಡಲು ಬಾರದಾಗಿದೆ. ಆದ್ದರಿಂದ ಪೂರ್ಣಸ್ವಾತಂತ್ರ್ಯದ ಸಂಗ್ರಾಮದಲ್ಲಿ ಈ ಧರ್ಮಭೇದಗಳನ್ನಳಿಸಲು ವಿಶಾಲತತ್ತ್ವಗಳ ಮೇಲೆ ಜೋರನ್ನಿಡಬೇಕಾಗಿದೆ. ಒಂದೆಡೆಯಲ್ಲಿ ಪಂಡಿತ ಜವಾಹರಲಾಲರು ತರುಣರನ್ನುದ್ದೇಶಿಸಿ– "ನೀವು ತರುಣ ಸಂಘಗಳ ಮುಂದಾಳುಗಳಾಗಿದ್ದೀರಿ; ಮತ್ತು ಅವುಗಳ ಗಟ್ಟಿಮುಟ್ಟು ಸಂಘಟನೆಯನ್ನು ಮಾಡಿರುವಿರಿ. ಆದರೆ ನಿಮ್ಮೆದು

ರಿಗೆ ಅದಕ್ಕೆ ತಕ್ಕದಾದ ದೊಡ್ಡ ಧ್ಯೇಯವಿಲ್ಲದಿದ್ದರೆ ಎಲ್ಲವೂ ವ್ಯರ್ಥ. ಆದರ್ಶವಿಲ್ಲದ ಸಂಸ್ಥೆಯು ಚುಕ್ಕಾಣಿಯಿಲ್ಲದ ಹಡಗವಂತೆ. ಆದ್ದರಿಂದ ನೀವು ಉಚ್ಚಧ್ಯೇಯವನ್ನಿಟ್ಟುಕೊಳ್ಳಬೇಕು. ಅದರ ಸಿದ್ಧಿಗೆ ಸನ್ನದ್ಧರಾಗಬೇಕು. ತತ್ತ್ವಗಳ ವಿಚಾರದಲ್ಲಿ ಒಡಂಬಡಿಕೆಯಿಲ್ಲ. ಒಪ್ಪಂದಗಳ ವಾಸನೆಗೆ ಬಿದ್ದು ನಿಮ್ಮ ಆದರ್ಶಗಳಿಗೆ ಅಲ್ಪತೆಯನ್ನು ತರಬೇಡಿ. ಹೊಲವನ್ನು ಉತ್ತು ಬಿತ್ತು ಸಾಗುಮಾಡುವ ಒಕ್ಕಲಿಗರ ಮತ್ತು ಗಿರಣಿಗಳಲ್ಲಿ ಮೈಮುರಿದು ದುಡಿಯುವ ದುಡಿಮೆಗಾರರ ದೈನ್ಯಾವಸ್ಥೆಯನ್ನು ಮರೆಯದಿರಿ. ಶೂದ್ರರೂ ಅಸ್ಪೃಶ್ಯರೂ ಆದವರ ಪಡಿಪಾಟಲನ್ನು ಗಣನೆಗೆ ತನ್ನಿ. ಹಿಂದುಸ್ಥಾನದ ಗಡಿಗಳನ್ನು ಮೀರಿ ದೃಷ್ಟಿಕ್ಷೇಪ ಮಾಡಿರಿ. ಅಲ್ಲಿಯ ಜನಾಂಗದವರು ಇಂಥ ಸಮಸ್ಯೆಗಳನ್ನು ಹೇಗೆ ಬಿಡಿಸುವರೆಂಬುದನ್ನು ತಿಳಿಯಿರಿ. ರಾಷ್ಟ್ರೀಯ ಸ್ವಾತಂತ್ರ್ಯಕ್ಕೋಸ್ಕರ ದೇಶಾಭಿಮಾನಿಗಳಾಗಿರಿ. ಮತ್ತು ಸರ್ವ ಜಗತ್ತನ್ನು ಪಾರತಂತ್ರ್ಯದಿಂದ ಬಿಡುಗಡೆ ಮಾಡಲು ಅಂತರ್ರಾಷ್ಟ್ರೀಯ ದೃಷ್ಟಿಯನ್ನಿಡಿರಿ. ನಮ್ಮ ಆದರ್ಶಗಳನ್ನು ಸಾಧಿಸುವುದರಲ್ಲಿ ನಾವು ಸಾವಿಗೆ ಹೆದರದ ಅಮರರೇ ಆಗಿರುವೆವೆಂದು ಭದ್ರಭಾವನೆಯನ್ನಿಡಿರಿ. ಯಾರ ಮನವು ಮುದಿಯಾಗಿದೆಯೋ ಅವರ ನೋಟವು ಕೆಲವೊಂದು ಪರಿಘವನ್ನು ಮೀರಿ ಹೋಗುವುದಿಲ್ಲೆಂಬುದು ದಿಟವು. ಆದರೆ ಯೌವನ ಮನವು ಹೊಚ್ಚ ಹರೆಯದ ಹುರುಪಿನ ರೆಕ್ಕೆಗಳನ್ನು ಕಟ್ಟಿ ಹಾರುತ್ತಿದೆಯೋ ಅವನ ವಿಶಾಲದೃಷ್ಟಿಯು ವಿಶ್ವದ ಮೇರೆಗಳನ್ನು ಮುಟ್ಟುವುದು. ಕಾಲವನ್ನು ದಾಟುವುದು." ಎಂದು ಉದ್ಘೋಷಿಸಿದರು.

ಇಂತು ಸ್ವಾತಂತ್ರ್ಯದ ಪ್ರೀತಿಯನ್ನು ಪಸರಿಸುವುದಕ್ಕೆ ದೇಶದ ತುಂಬ ಅನೇಕ ಯುವಕ ಸಂಘಗಳು ಸ್ಥಾಪಿಸಲ್ಪಟ್ಟವು. ರಾಷ್ಟ್ರೀಯ ಮತ್ತು ಸಾಮಾಜಿಕ ಸ್ವಾತಂತ್ರ್ಯ ಸಂಪಾದನೆಯೇ ಸಂಘದ ಮುಖ್ಯ ಉದ್ದೇಶವಾಗಿಯೂ ಈ ಉದ್ದೇಶ ಸಾಧನೆಯಲ್ಲಿ ಅವಶ್ಯವಾಗಿರುವ ಓರಣೆ ಮತ್ತು ಮತ್ತು ಸ್ಫೈರಣೆಗಳನ್ನು ಮೈಗೂಡಿಸಿಕೊಳ್ಳಲು ಸಂಘವು ಈ ಕೆಳಗಿನ ಕಾರ್ಯಗಳನ್ನು ಕೈಕೊಳ್ಳುತ್ತದೆ.

(೧) ಸಭಾಸದರಲ್ಲಿ ಜಾತಿಮತಗಳ ಮೂಢ ಕಲ್ಪನೆಗಳನ್ನು ಕುಗ್ಗಿಸಿ ಸಹಿಷ್ಣುತೆಯ ವಿಶಾಲದೃಷ್ಟಿಯನ್ನು ಹಿಗ್ಗಿಸುವುದು.

(೨) ಸ್ವದೇಶೀ ವಸ್ತುಗಳನ್ನೇ ಉಪಯೋಗಿಸುವುದು. ಖಾದಿಯನ್ನೇ ಧರಿಸುವುದು.

(೩) ಸಮಾಜದೊಳಗಿನ ಆರ್ಥಿಕ ಅಸಮಾನತೆಯನ್ನು ನಷ್ಟಪಡಿಸಿ ಸಹಕಾರದ ಮೇಲೆ ಸಮಾಜದ ಸಾಂಪತ್ತಿಕ ರಚನೆಯನ್ನು ಮಾಡುವುದು.

(೪) ಕೇವಲ ರೂಢಿಯಿಂದ ಬಲಿತು ಮುಂದೆ ಪೊಳ್ಳು ಶಾಸ್ತ್ರಾಧಾರದಿಂದ ಬೆಳೆದ ಅಸ್ಪೃಶ್ಯತೆಯಂಥ ಕೇಡು ಕಟ್ಟಳೆಗಳನ್ನು ಕಿತ್ತೊಗೆಯೋಣ.

(೫) ಸ್ತ್ರೀಯರಿಗೆ ಸರಿಸಮಾನ ಅಧಿಕಾರಗಳನ್ನು ಕೊಡುವುದು.

(೬) ತರುಣರಿಗೆ ದೇಶದ ಸ್ಥಿತಿಯನ್ನು ಚೆನ್ನಾಗಿ ತಿಳಿಸಿ ಅವರಲ್ಲಿ ಸ್ವತಂತ್ರವಿಚಾರವನ್ನೂ ಹೋರಾಟಗಾರಿಕೆಯ ಕಲ್ಪನೆಯನ್ನೂ ಬೆಳೆಸುವುದು.

(೭) ತರುಣರಲ್ಲಿ ಸಹಕಾರದ ಬಲವನ್ನು ಹುಟ್ಟಿಸಿ ಅವರು ಸ್ವಾವಲಂಬಿಗಳಾಗುವಂತೆ ಮಾಡುವುದು.

(೮) ತರುಣವರ್ಗವು ರಾಷ್ಟ್ರಸೇವೆಗೆ ಯೋಗ್ಯವಾಗುವಂತೆ ಸ್ವಯಂಸೇವಕ ಶಿಕ್ಷಣವನ್ನೂ ಶಾರೀರಿಕ ಶಿಕ್ಷಣವನ್ನೂ ಕೊಡುವುದು.

(೯) ಸರ್ವ ರಾಷ್ಟ್ರೀಯ ಪ್ರಶ್ನೆಗಳ ಅಭ್ಯಾಸಮಾಡುವ ಇಚ್ಛೆಯನ್ನು ಬೆಳೆಸುವುದು. ಎಲ್ಲ ಪ್ರಾಂತಗಳ ಮತ್ತು ಪರದೇಶೀಯ ಸಂಘಗಳ ಬಳಕೆಯನ್ನು ಹೆಚ್ಚಿಸುವುದು.

ಇವುಗಳಲ್ಲದೆ ಆಯಾ ಪ್ರಾಂತಗಳ ತರುಣರಿಗೆ ತಮಗೆ ಬೇರೆ ಯಾವುದಾದರೂ ಚಟುವಟಿಕೆಗಳನ್ನು ನಡೆಸುವುದಿದ್ದರೆ ಹಾಗೆ ಮಾಡಬಹುದು.

ಈ ಮೇಲಿನ ಉದ್ದೇಶಗಳ ತಳದಲ್ಲಿರುವ ತತ್ತ್ವಗಳನ್ನು ಹಿಂದುಸ್ಥಾನದ ಮುಂದಾಳುಗಳೆಲ್ಲರೂ ತಿಳಿದರೋ ಇಲ್ಲವೋ ಹೇಳಲಿಕ್ಕೆ ಬಾರದು. ಭಾರತದ ತರುಣ ವೀರಾಗ್ರೇಸರರಲ್ಲಿ ಒಬ್ಬರಾದ ಶೂರ ಸುಭಾಸ ಚಂದ್ರ ಬೋಸರಂಥ ಜವಾಹರಲಾಲರನ್ನು ಅನೇಕ ಸಂಗತಿಗಳಲ್ಲಿ ಸರಿಗಟ್ಟುವ ಪಟುಭಟರು ಸಹ ಭಾರತದ ಪ್ರಾಚೀನ ಪ್ರಭಾವಕ್ಕೆ ಬೆರಳು ತೋರಿಸಿ ತರುಣರಿಗೆ ಮಾರ್ಗದರ್ಶನ ಮತ್ತು ಪ್ರೇರಣೆಯನ್ನು ಪಡೆಯಲು ಹೇಳಿರುವರು. ಭವ್ಯ ಭಾರತದ ಪುರಾತನ ಘನತೆಯನ್ನೂ ಗೌರವವನ್ನೂ ನಾವು ಬಲ್ಲೆವು. ಆದರೆ ಈಗ ಆ ಚರಿತ್ರೆಯಿಂದ ಆದರ್ಶಗಳನ್ನು ಆಯು ನಾಡಿನೆದುರಿಗಿಡಬೇಕಾದರೆ ಬಹಳ ಎಚ್ಚರ ತೆಗೆದುಕೊಳ್ಳಬೇಕು. ಅದರಿಂದ ಬಚ್ಚಿಡತಕ್ಕ ಭಾಗವನ್ನು ವಿಂಗಡಿಸಿ ಬಿಚ್ಚಿ ಹೇಳುವ ಅಂಶವನ್ನೇ ಎತ್ತಿ

ಸಾರಬೇಕಾಗುತ್ತದೆ. ಏಕೆಂದರೆ ಇದು ಹೊಸ ಕಾಲ, ಹೊಸ ಜನಾಂಗ; ಅನೇಕ ಧರ್ಮಗಳ ಕಲಬೆರಿಕೆಯು ಇಲ್ಲಿ ಆಗಿದೆ. ಆದ್ದರಿಂದ ಯಾರಿಗೂ ದೂರದೆ, ಯಾರಿಗೂ ನೋಯಿಸದೆ ರಾಷ್ಟ್ರದ ಐಕ್ಯವನ್ನು ಸಾಧಿಸಿ ವೈರಿಗಳನ್ನು ಬಾಧಿಸಬೇಕು. ಹಿಂದಿನದನ್ನು ಹೊಸತನದ ಬೆಳಕಿನಲ್ಲಿ ತೂರಿ ಸರಿಪಡಿಸಬೇಕು. ಹಿಂದಿನ ಅನೇಕ ಮುಖಗಳುಳ್ಳ ಸಂಸ್ಕೃತ ಗ್ರಂಥಗಳನ್ನು ಆಧಾರವಾಗಿಟ್ಟು ಮಾತಾಡುವುದು ಭಿನ್ನಾಭಿಪ್ರಾಯಗಳನ್ನು ಬೆಳೆಸಲು ಬಹಳ ಸಹಾಯಕಾರಿ. ಇಂಥ ಹಿಂದಿನ ಹೆಚ್ಚಳದ ವರ್ಣನೆಯಿಂದ ಇನ್ನೊಂದು ಗೊಂದಲವೇಳುತ್ತದೆ. ಹಿಂದುಗಳು ತಮ್ಮ ಹೆಚ್ಚುಗಾರಿಕೆಯನ್ನು ಬಣ್ಣಿಸುವಾಗ್ಗೆ ಮುಹಮ್ಮದೀಯರು ತಮ್ಮ ಕುರಾಣದ ಕಂತೆಯನ್ನು ಬಿಚ್ಚುವವರೇ. ಕೊನೆಗೆ ಕುರಾಣ ಹಾದೀಜಗಳ ಮತಕ್ಕೂ ವೈದಿಕಮತಕ್ಕೂ ಮೊದಲಿನಿಂದಿದ್ದ ವೈಷಮ್ಯವು ವ್ಯಕ್ತವಾಗಿ ಮೈದೋರುವುದೇ ಖಂಡಿತ. ಇಸ್ಲಾಮದ ಘನತೆಯನ್ನು ವರ್ಣಿಸುವಾಗ ಅವರು ಮುಸಲ್ಮಾನ ರಾಷ್ಟ್ರಗಳ ಚರಿತ್ರೆಯನ್ನೆಲ್ಲ ಎತ್ತಿ ಕೊಂಡಾಡಿ ಇಲ್ಲಿಯವರ ದೃಷ್ಟಿಯನ್ನು ಹಿಂದುಸ್ಥಾನದಿಂದ ಹೊರಗೆ ತಳ್ಳುವವರೇ ಸರಿ. ಸದ್ಯಕ್ಕಿರುವ ಸಂತಾಪಗಳಿಗೆ ಚಿಮಣಿ ಎಣ್ಣೆ ಸುರುವಿದಂತಾಗಿ ಸಮಾಧಾನವು ಶಕ್ಯವಿಲ್ಲದ ಸಂಗತಿಯಾಗುತ್ತದೆ. ಹಿಂದುಗಳು ವೇದಾಂತದ ವಿವೇಕಕ್ಕೊಪ್ಪುವ ನಿಜವಾದ ಸಂಗತಿಗಳನ್ನು ಬೇಕಾದಷ್ಟು ಮಾತಾಡಿದರೂ ಅದರಿಂದ ಅವರಿಗೇನೂ ಅನ್ನಿಸುವುದಿಲ್ಲ. ಅವರಿಗೆ ಅಂತಃಕರಣಕ್ಕೆ ಅಳುಕುವಂತೆ ಹೇಳಬೇಕಾದರೆ ಅವರ ಧರ್ಮಸಂಸ್ಕೃತಿಗಳನ್ನೆತ್ತಿಯೇ ಮಾತಾಡಬೇಕು. ಆದ್ದರಿಂದ ಸ್ವಾಮೀ ವಿವೇಕಾನಂದರು ಅನೇಕ ಸಭೆಗಳಲ್ಲಿ ಸಾರಿ ಹೇಳಿದಂತೆ ಜವಾಹರಲಾಲರು ಹೇಳುವುದೇನೆಂದರೆ “ ಭಾರತ ದೇಶವು ಸನಾತನವಾದ ಸತ್ಯ ತತ್ತ್ವಗಳನ್ನು ಅವಲಂಬಿಸಿಯೇ ಒಕ್ಕಟ್ಟಾಗಬೇಕು. ಜಾತಿ ಜಂಜಾಲದ ಪಂಥಪಂಗಡಗಳ ಬಣಗುಬವರವು ನಿಲ್ಲಿಸಲ್ಪಡಬೇಕು. ವಿಶ್ವಧರ್ಮದ ಬೆನ್ನು ಹತ್ತಬೇಕು. ಆ ಅತ್ಯುತ್ಕೃಷ್ಟಾದರ್ಶದಲ್ಲಿ ಮುಂದರಿಯಬೇಕು ” ನಮ್ಮ ತರುಣನಾಯಕರು ಇದೇ ವಿಷಯವನ್ನು ಇನ್ನೂ ಸ್ಪಷ್ಟಮಾಡಿ ಹೇಳುತ್ತಾರೆ. “ ಹಿಂದೂಗಳು ತಮ್ಮ ಧರ್ಮಸಂಸ್ಕೃತಿಗಳ ವಿಚಾರವಿಮರ್ಶೆಯನ್ನು ಮುಸಲ್ಮಾನ ಕಿರಸ್ತಾನರ ಅಭಿಪ್ರಾಯಗಳ ಒರೆಗಲ್ಲಿಗೆ ಹಚ್ಚಿ ನೆಲೆಸಬೇಕು. ಮುಸಲ್ಮಾನರು ತಮ್ಮ ಧರ್ಮ ಸಂಸ್ಕೃತಿಗಳನ್ನು ಹಿಂದೂ ಕಿರಸ್ತಾನರ ವಿಚಾರವಿಮರ್ಶೆಯಿಂದ ತಿಳಿದು ಉಳಿಸಬೇಕು. ಕಿರಸ್ತಾನರು ಹಿಂದೂ ಮುಸಲ್ಮಾನರ ಅಭಿಪ್ರಾಯಗಳ

ಬೆಳಕಿನಲ್ಲಿ ತಮ್ಮದನ್ನು ಹಿಡಿದು ನೋಡಿಕೊಳ್ಳಬೇಕು. ಇದಕ್ಕೆ ಸ್ವತಂತ್ರ ವಿಚಾರ ಶಾಸ್ತ್ರದಲ್ಲಿ ಬೌದ್ಧಿಕ ಪ್ರಾಮಾಣಿಕತೆ (Intellectual Honesty) ಯೆಂದೆನ್ನುವರು. ಸುಭಾಷಚಂದ್ರ ಬೋಸರು ಹೇಳುವ ಮಾರ್ಗದಿಂದ ಸಂಸ್ಕೃತಿ ಸಂಘರ್ಷಣವಾಗುತ್ತದೆ. (conflict) ಇಂಥ ಮಾನ್ಯ ಮುಂದಾಳುಗಳು ಆಗಾಗ್ಗೆ "ಸತ್ಯಯುಗಕ್ಕೆ ಹೊರಳಿರಿ" "ವೇದಕಾಲಕ್ಕೆ ನೋಡಿರಿ" ಎಂಬ ಉಪದೇಶವನ್ನು ಕೊಡುತ್ತಾರೆ. ಈ ಶಬ್ದ ಸಮುಚ್ಚಯಗಳ ಅರ್ಥವೇನೋ ಅವರಿಗೇ ಗೊತ್ತು. ಈ ಅಸ್ಪಷ್ಟವಾದ ಮಸಮುಸಕಾದ ಅರ್ಥವುಳ್ಳ ವಾಕ್ಯಗಳನ್ನುಪಯೋಗಿಸಿ ಜನರಲ್ಲಿ, ಮೊದಲೇ ಸಾಕಾದಷ್ಟು ಸೇರಿಕೊಂಡಿದ್ದ ಧಾರ್ಮಿಕ ಮೂಢ ಕಲ್ಪನೆಗಳನ್ನು ಇನ್ನೂ ಹೆಚ್ಚಿಸುವುದೇಕೆ? ಆದ್ದರಿಂದ ತರುಣರು ಇಂಥ ಮುಂದಾಳುಗಳ ಕೈ ಹಿಡಿದು ಕೇಳಬೇಕು. ಅವರು ಉಪದೇಶಿಸುವ ವಾಕ್ಯಗಳ ಅರ್ಥವನ್ನು. ವೇದಕಾಲ, ಸತ್ಯಯುಗಗಳ ಬಗ್ಗೆ ಅವರಿಗೇನು ಗೊತ್ತಿರುವುದು? ಪ್ರಾಚೀನ ಸಂಸ್ಕೃತಿಯ ಬಗ್ಗೆ ಅವರೇನೆನ್ನುವದು? ಅವರ ಅಭಿಪ್ರಾಯಗಳು ಯಾವ ಪುಸ್ತಕದಲ್ಲಿವೆ? ಮಾನವ ಜೀವಿತದ ಯಾವ ಅಂಶಕ್ಕೆ ಯಾವ ಅಂಗಕ್ಕೆ ಈ ಸತ್ಯಯುಗದ ಬಾಳ್ವೆಯನ್ನು ಸುರುಮಾಡುವುದು? ರೈತ ಯಜಮಾನ, ಆಳು ಧನಿ, ಸರಕಾರ ಪ್ರಜೆ, ಸ್ತ್ರೀಪುರುಷ, ವ್ಯಕ್ತಿಸಮಾಜ, ಇವರ ಸಂಬಂಧಗಳನ್ನೂ ಬಲಬಾಧ್ಯತೆಗಳನ್ನೂ ಸತ್ಯಯುಗದ ಜನಜೀವನದಿಂದ ತಿಳಿದುಕೊಳ್ಳಬಹುದೇ? ಸತ್ಯಯುಗದ ಮುಂದಾಳುತನದಲ್ಲಿ ಭಾರತದ ಬೆಳವಣಿಗೆಯಾಗುವುದು ಸಾಧ್ಯವೇ? ಇವೆಲ್ಲ ಪ್ರಶ್ನೆಗಳಿಗೆ ಉತ್ತರ ಕೊಡುವಾಗ ಅವರಿಗೆ ತನ್ನಿಂದ ತಾನೇ ತಿಳಿವುದು ತಮ್ಮ ಸದ್ಯಸ್ಥಿತಿಯ ಅಜ್ಞಾನವೂ ಅವಿಚಾರವೂ. ಈಗ ಅನೇಕ ಮತಮತಾಂತರಗಳ ಬೀಡಾದ ಭಾರತದಲ್ಲಿ ಕೇವಲ ಆರ್ಯಧರ್ಮದ ಸಾಮಾಜಿಕ ಕಟ್ಟಳೆಗಳ ತಳಹದಿಯ ಮೇಲೆ ನಾಡಿನ ಒಕ್ಕಟ್ಟನ್ನು ಚಿಂತಿಸುವುದು ಎಂಥ ತಿಳಿಗೇಡಿತನವೆಂಬುದು ನಿಚ್ಚಳವಾಗುತ್ತದೆ. ಅದಲ್ಲದೆ ಈ ಮುಂದಾಳುಗಳು ಕಾಲ್ಪನಿಕತೆಯಿಂದ ವರ್ಣಿಸುವ ಸಮಾಜಸ್ಥಿತಿಯು ವೇದಕಾಲದಲ್ಲಿ, ಸತ್ಯಯುಗದಲ್ಲಿ ಇರಲಿಲ್ಲೆಂದು ಪಂಡಿತರೂ ಪುರಾಣಶರೀಫಗಳಲ್ಲಿಲ್ಲೆಂದು ಉಲೇಮರೂ ಸಾರಿ ದೂರುವರು. ಇದಕ್ಕೆ 'ಶಾರದಾ ಬಿಲ್ಲಿ'ನ ವಿರುದ್ಧ ನಡೆದ ಚಳವಳವೇ ಹೋಮ ಹವನಗಳೇ, ಮುಸಲ್ಮಾನ ಉಲೇಮಾನಗಳ ಪ್ರಾರ್ಥನೆಗಳೇ ಪ್ರತ್ಯಕ್ಷ ದೃಷ್ಟಾಂತ. ಅಂದಮೇಲೆ ಬೆಳೆಯುವ ನಾಡಿಗೆ ಅಡ್ಡಗಾಲು ಹಾಕಿ ತಡೆಯನ್ನೊಡ್ಡುವ ಈ

ಧರ್ಮಗಳನ್ನೇ ವಿರೋಧಿಸಿ, ಸಾಮಾನ್ಯವಾಗಿ ಪ್ರಪಂಚದಲ್ಲಿ ವಿಶ್ವಧರ್ಮಕ್ಕೆ ಯೋಗ್ಯವಾದ, ಅನಾದಿಬುನಾದಿ ಕಾಲದಿಂದಲೂ ನಿತ್ಯಸಿದ್ಧ ಸತ್ಯತತ್ತ್ವಗಳೆಂದು (Eternal Verities) ಸ್ವೀಕೃತವಾದ ಸಿದ್ಧಾಂತಗಳನ್ನೇ ಜನತೆಯ ಮುಂದಿಟ್ಟು, ಸ್ವಾಮಿ ವಿವೇಕಾನಂದರಂತೆ ಧಾರ್ಮಿಕ ಅಲಿಪ್ತತೆಯಿಂದ ಮುಂದರಿಯುವುದೇ ತರಣೋಪಾಯವಲ್ಲವೇ ?

ಮೇಲಿನ ಉಲ್ಲೇಖದಿಂದ ನಮ್ಮ ನಾಡಿನ ಎಲ್ಲ ಮುಂದಾಳುಗಳೂ "ತಾನು ಹೇಳುವುದನ್ನು ತಾನರಿಯನು" ಎಂಬ ದುರವಸ್ಥೆಯಲ್ಲಿದ್ದಾರೆಂದು ನನ್ನ ಮತವಲ್ಲ. ಏಕೆಂದರೆ ಮಹಾತ್ಮಾ ಗಾಂಧಿಯವರು "ಹಿಂದೀ ಸ್ವರಾಜ್ಯ" ಎಂಬ ಪುಸ್ತಕದಲ್ಲಿ ಹಿಂದೂ ಧರ್ಮವನ್ನು ತಮಗೆ ತಿಳಿದಂತೆ ವಿಮರ್ಶಿಸಿ ಅದರ ಹುಳುಕುಗಳನ್ನು ಹೊರಗೆಡವಿ, ಕೊನೆಗೆ ಯಂತ್ರಯುಗವನ್ನು ಸಹ ಯಾವ ಧೈರ್ಯದಿಂದಲೂ ನಿರ್ದಾಕ್ಷಿಣ್ಯದಿಂದಲೂ ಟೀಕಿಸಿರುವರೆಂಬುದು ಎಲ್ಲರಿಗೂ ತಿಳಿದ ಮಾತು. ಪಂಡಿತ ಮದನಮೋಹನ ಮಾಲವೀಯರು ಸಹ ತಮ್ಮ ಸುಧಾರಕ ಮನೋಗತಿಯ ಪರಿಣಾಮದಿಂದ ಶಾಸ್ತ್ರೀ-ಪಂಡಿತರೊಡನೆ ವಾದ ಭೂಮಿಯಲ್ಲಿಳಿದು ಕುಸ್ತಿ ಹಿಡಿಯಬೇಕಾಯಿತು. ಭಾಷಾಶಾಸ್ತ್ರ, ಸಂಸ್ಕೃತ ಗ್ರಂಥಗಳನ್ನು ಹಿಡಿದು ಚರ್ಚೆಮಾಡಬೇಕಾಗಿದೆ. ಇತ್ತ ಹೊಸದಾಗಿ ಮೌಲಾನರೆನಿಸಿಕೊಂಡ ಅಲ್ಲೀ ಬಂಧುಗಳ ಅವಸ್ಥೆಯೂ ಹಾಗೇ ಆಯಿತು. ಅಲ್ಲೀ ಬಂಧುಗಳಂತೂ ಜಮಾಯತ್-ಉಲ್-ಉಲೇಮರ ಸಂಗಡದಲ್ಲಿಯೇ ಕರಗಿ ಬೆರೆತುಹೋದರು ! ಇವರೆಲ್ಲರೂ ಪ್ರಾಮಾಣಿಕರಾಗಿದ್ದಾರೆಂದು ಯಾರಿಗೆನಿಸುವುದಿಲ್ಲ ? ಅವರವರ ಮಟ್ಟಿಗೆ ಅವರು ವಿಮಲಮತಿಯಿಂದಲೇ ಕೆಲಸಮಾಡುತ್ತಿರುವರು. ಇರಲಿ.

ನಮ್ಮ ಮುಂದಾಳುಗಳು ಇನ್ನೂ ತಮ್ಮ ಹೃದಯಕ್ಕೆ ಹತ್ತುವಂಥ, ಬುದ್ಧಿಗೆ ಹೊಳೆಯುವಂಥ ಸಂಗತಿಗಳನ್ನು ಮನಸಾರೆ ನೋಡಿ, ಮೈಯಾರೆಮಾಡಿ ತೋರಿಸುವ ಹಂಬಲವನ್ನು ಹೊತ್ತಿಲ್ಲ. ಇದ್ದ ಸ್ಥಿತಿಯ ಬಗ್ಗೆ ಅಸಮಾಧಾನವಿದ್ದ ಮೇಲೆ ಅವರು ಅದರ ವ್ಯತ್ಯಾಸಮಾಡುವ ಹವ್ಯಾಸವನ್ನು ಏಕೆ ವಹಿಸಬಾರದು ? ಈಗ ಪ್ರಚಲಿತವಾದ ಸಮಾಜದ ರೀತಿನೀತಿಗಳು ಇವರಿಗೆಲ್ಲ ಸಮ್ಮತವೇ ? ಮೊದಲು ನೇರವಾಗಿ ಸರಳ ಮನಸ್ಸಿನಿಂದ ಈ ಪ್ರಶ್ನೆಗೆ ಉತ್ತರವನ್ನು ಕೊಡಬೇಕು. ತಮಗೆ ತೋರುವ, ಸಮಾಜಪುರುಷನ ಶುದ್ಧೀಕರಣದ

ಉಪಾಯಗಳನ್ನೇಕೆ ಕೈಕೊಳ್ಳಬಾರದು ? ಈ ಬಗೆಯ ಸಿದ್ಧತೆಯೇ ನನ್ನು ಮನಕ್ಕಿಲ್ಲ. ಅಸ್ಪೃಶ್ಯತೆಯನ್ನಳಿಸಿರಿ, ಹಿಂದುಳಿದವರನ್ನು ಮೇಲಕ್ಕೆತ್ತಿರಿ, ಜಾತಿ ಭೇದಗಳನ್ನು ನಿರ್ಮೂಲಿಸಿರಿ ಎಂಬ ಕೊಂಗ್ರೆಸಿನ ಕೂಗಿಗೆ ನಾವು ದನಿಗೂಡಿಸು ತ್ತೇವೆ ಇಷ್ಟೇ ಹೊರತು ಹೆಚ್ಚಿನದೇನೂ ನಾವು ಮಾಡುತ್ತಿಲ್ಲ. ಈಗ ಉಪಾಯ ಗಾಣದೆ, ಬೇರೆ ನೆರವಿಲ್ಲದೆ ಈ ವಿಚಾರಗಳನ್ನು ಮಾತ್ರ ಹಾಗೂ ಹೀಗೂ ಒಪ್ಪು ತ್ತೇವೆ. ಕಾಲವು ಪಲ್ಲಟಿಸಿದೆ. ಸಾಂಪತ್ತಿಕ ಸ್ಥಿತಿಯು ವ್ಯತ್ಯಾಸಗೊಂಡಿದೆ. ಇದನ್ನೇ ಚೆನ್ನಾಗಿ ವಿಮರ್ಶಿಸಿ ನೋಡಿ ಪುರಾಣಮತವಾದಿಗಳು ( Conservatives ) ಬಾಳುವೆಯನ್ನು ಹೊಂದಿಸಿಕೊಳ್ಳಬೇಕು. ಆದರೆ ಈ ನವಯುಗದ ಕೂಗು " ಸತ್ಯಯುಗಕ್ಕೆ ತಿರುಗಿರಿ" " ಪುರಾಣಕ್ಕೆ ತಿರುಗಿರಿ" ಎಂಬುದರಲ್ಲಿಲ್ಲ.

ಸನ್ ೧೯೨೮ರಲ್ಲಿ ಝಾಂಸಿಯಲ್ಲಾದ ಪರಿಷತ್ತಿನಲ್ಲಿ ಜವಾಹರಲಾಲರು " ಹಿಂದುಸ್ಥಾನಕ್ಕೆ ಸ್ವಾತಂತ್ರ್ಯಸಿಕ್ಕದೆ ಇಂಗ್ಲೆಂಡದೊಡನೆ ಸಖ್ಯವಾಗುವುದು ಶಕ್ಯವಿಲ್ಲ. ಆದ್ದರಿಂದಲೇ ನಾವು ಸ್ವಾತಂತ್ರ್ಯದ ಸಲುವಾಗಿ ಶ್ರಮಬಡುತ್ತಿರು ವುದು. ಸಾಮ್ರಾಜ್ಯಸತ್ತಾವಾದಿಗಳಾದ ಬ್ರಿಟಿಷ ಸಾಮ್ರಾಜ್ಯದ ಅಂಶರಾಗಿ ನಾವು ಉಳಿದರೆ ಸ್ವಾತಂತ್ರ್ಯವಾಗಲಾರದು. ನಮಗೆ ಈ ಸಾಮ್ರಾಜ್ಯದ ಸಂಪೂರ್ಣ ಅನುಭವವಾಗಿದೆ. ಅದು ಯಥೇಷ್ಟವಾಗಿದೆ, ಸಾಕುಸಾಕಾಗಿದೆ. ಅದರಿಂದ ನಮಗೆ ಸ್ವಾತಂತ್ರ್ಯಕ್ಕೂ ಸಾಮ್ರಾಜವಾದಕ್ಕೂ ಅಜಗಜಾಂತರವಿದೆಯೆಂದು ಚೆನ್ನಾಗಿ ತಿಳಿದು ಬಂದಿದೆ. ಇಂಗ್ಲೆಂಡವು ಸಾಮ್ರಾಜ್ಯವಾದವನ್ನು ಬಿಟ್ಟಂದೇ ನಮಗೂ ಅದಕ್ಕೂ ಸ್ನೇಹ ಸಹಕಾರಗಳು. ಆದರೆ ಸದ್ಯಕ್ಕಂತೂ ಇಂಥ ಆಲೋ ಚನೆಗಳೇ ಸುಳ್ಳು. ಎಲ್ಲವೂ ಬರಿ ಮನೋರಥ. ಬ್ರಿಟಿಷ ಕಾಮನ್‌ವೆಲ್ಥದಲ್ಲಿ ಸೇರಿದರೆ ನಮ್ಮ ಪ್ರಗತಿಯಾಗುವುದು, ನಮ್ಮ ಕಲ್ಯಾಣವಾಗುವುದು ಎಂದು ಯಾರಿಗಾದರೂ ಅನಿಸುತ್ತಿರಬಹುದು. ಅದು ಮತ್ತೊಂದು ಹುಚ್ಚು ಕಲ್ಪನೆ. ಇವೆಲ್ಲ ಮರುಳು ಮಾತುಗಳನ್ನು ನಾವು ಬಿಟ್ಟುಬಿಡಬೇಕು. ಇಂಗ್ಲೆಂಡವು ಸಾಮ್ರಾಜ್ಯವಾದದ ಅತ್ಯಂತ ಅಭಿಮಾನಿಯು. ಅಲ್ಲಿಯ ಕೂಲಿಕಾರರ ಪಕ್ಷದವರು ಸಹ ಸಾಮ್ರಾಜ್ಯವಾದವವರೇ. ಅವರೆ ಮೇಲೆ ಮೇಲೆ ಸಕ್ಕರೆಯಂಥ ಮಾತು ಗಳನ್ನಾಡುತ್ತಾರೆ. ಇರಲಿ. ಇತ್ತ ಭರತಖಂಡದಲ್ಲಿ ಅನೇಕರು ಸ್ವಾತಂತ್ರ್ಯದ ಉಸಿರಿನೊಂದಿಗೆ ಜಾತಿಮತಗಳ ಬಲಬಾಧ್ಯತೆಗಳನ್ನೂ ಒತ್ತಿಮಾತಾಡುತ್ತಾರೆ. ಈ ಜಾತಿಯ ಮುಂದಾಳುಗಳ ಮನಸ್ಸು ನಿರ್ಮಲವಿದೆ. ಆ ಧರ್ಮದವರ

ಹೃದಯವು ಸ್ವಚ್ಛವಿದೆಯೆಂಬದಾಗಿಯೂ ನಮಗೆ ಆಗಾಗ್ಗೆ ಬೋಧಿಸುತ್ತಾರೆ. ಇರಬಹುದು. ಇವರ ಹೃದಯವು ಹೊಗೆಯಿಂದ ಮುಸುಕಿದೆಯೆಂದು ಯಾರು ಹೇಳಿದರು ? ನನ್ನನ್ನು ಕೇಳಿದರೆ ನಾನು ಪ್ರತಿಯೊಂದು ಜಾತಿಮತದವರ ಅಂತಃ ಕರಣವೂ ನಿಚ್ಚಳವಾಗಿದೆಯೆಂದು ಸಾರಿ ಹೇಳುವೆನು. ಆದರೆ ಈ ಸ್ವಾತಂತ್ರ್ಯ ಮತ್ತು ಜಾತಿಮತ ಜಂಜಾಲಗಳನ್ನು ಕಳೆಬೆರಸಿದ ಹಲವು ಮುಂದಾಳುಗಳ ತಲೆಯು ಮಾತ್ರ ನಿರ್ಮಲವಾಗಿದೆಯೋ ಇಲ್ಲವೋ ಎಂಬ ಸಂದೇಹವು ನನ್ನನ್ನು ಬಾಧಿಸುತ್ತದೆ. ಏಕಂದರೆ ಇವೆರಡರಲ್ಲಿ ಸರ್ವ ಸಾಮಾನ್ಯ ಸಂಗತಿಗಳು ಯಾವವೂ ಇಲ್ಲ. ಅದಲ್ಲದೆ ಸ್ವತಂತ್ರ ಭಾರತದ ಭವ್ಯ ಭವನವನ್ನು ಮತಮತಾಂ ತರಗಳ ನುಸುಳುವ ಉಸುಬಿನ ತಳಹದಿಯ ಮೇಲೆ ನಿಲ್ಲಿಸಲು ಹೇಗೆ ಸಾಧ್ಯ ವಾದೀತು ? ” ಎಂದು ಸ್ಪಷ್ಟವಾಗಿ ಹೇಳಿದರು. ಇದರ ಮೇಲಿಂದ ಯುವಕ ಸಂಘದ ಚಳವಳದ ಬಗ್ಗೆ ಅವರ ಅಭಿಪ್ರಾಯವು ಚೆನ್ನಾಗಿ ತಿಳಿಯುತ್ತದೆ.

---

## ಸರ್ವಪಕ್ಷೀಯ ಪರಿಷತ್ತು

ವಕ್ತೃತ್ವವಿದ್ದರೆ ತೀರಿತು. ರಾಜಕಾರಣಪಟುಗಳಿಗೆ ಅದೊಂದು ಆಭ ರಣವೇ ಸರಿ. ಆದರೆ ವಾಚಾಲತೆಯು ವಿಲಕ್ಷಣ ಸ್ವರೂಪದ್ದಾಗಿದೆ. ಆಗಾಗ್ಗೆ ತಾನು ಮುಂದಾಳುವೆಂದು ಮೆರೆದು, ಹೆಗ್ಗಳಿಕೆಯಿಂದ ಜನಸಮೂಹದೆದುರು ಆಡಂಬರದಿಂದ ಮಾತಾಡದಿರುವುದು ಅನೇಕರಿಂದ ಆಗದು. ತನ್ನ ಜಂಬಮುರ ವತ್ತುಗಳನ್ನು ಮೆರೆಯಿಸುವ ಲಾಲಸೆಯು ಹಲವರಿಗುಂಟು; ಒಂದು ರೀತಿಯಿಂದು ನೋಡಿದರೆ, ಇದು ಸ್ವಾಭಾವಿಕವೇ ಆಗಿದೆ. ಏಕೆಂದರೆ ಕೆಲವೊಂದು ನಿಶ್ಚಿತ ಅಭಿಪ್ರಾಯಗಳನ್ನಿಟ್ಟುಕೊಂಡು ಕೆಲಸ ಮಾಡತಕ್ಕ ಜನರು ಆಗಾಗ್ಗೆ ಬೈಲಿಗೆ ಬರದೆ, ಮೂಲೆಯಲ್ಲಿಯೇ ಮುದುಡಿಕೊಂಡು ಕುಳಿತರೆ ಅವರಿಂದ ದೇಶಕ್ಕೆ ಆಗ ತಕ್ಕ ಕಲ್ಯಾಣವು ಸಾಕಷ್ಟು ಕೈಗೂಡುವುದಿಲ್ಲ. ಜನರಿಗೆ ನೆನಪುಶಕ್ತಿ ಕಡಿಮೆ. ಅರ್ಧಮರ್ಧ ಕಾರ್ಯಮಾಡಿ ಹಿಂದೆ ಸರಿದು ಎಷ್ಟೋ ದಿನಗಳ ನಂತರ ಪುನಃ ಬೆಳಕಿಗೆ ಬಂದ ಮನುಷ್ಯನ ಗುರುತನ್ನು ಕೂಡ ಅವರು ಹಿಡಿಯುವುದಿಲ್ಲ. ನಿತ್ಯದ ಹತ್ತುಗಡೆಯು ಹಾರಿದಂತಾಗಿ ಪುನಃ ಅವರು ಬಳಕೆಯಿಂದ ಪರಿಚಯವನ್ನು ಮಾಡಿಕೊಳ್ಳಬೇಕಾಗುವುದು. ಆದರೂ ಮಾತಾಳಿತನವನ್ನು ಬಿಟ್ಟು ಸಮಯ

ವರಿತು ಕೆಲವು ಕಾಲ ಸುಮ್ಮನಿರುವುದೂ ಅತ್ಯಗತ್ಯವೇ. ಎಷ್ಟೋ ಮುಂದಾಳು ಗಳು ಇಂಥ ವಾಕ್ಸಂಯಮನವನ್ನು ಸಾಧಿಸಿ ಕೆಲವು ಪ್ರಸಂಗಗಳಲ್ಲಿ ತಣ್ಣಗಿರುತ್ತಿ ದ್ದರೆ ಅವರ ಚರಿತ್ರೆಯೇ ಬೇರೆ ರೀತಿಯಿಂದ ಹೆಚ್ಚು ಪರಿಣಾಮಕಾರಿಯಾಗುತ್ತಿತ್ತು.

ಹೊತ್ತಿಲ್ಲದ ಹೊತ್ತಿನ ಮಾತುಗಾರಿಕೆಯು ಹೀನಾಯವಾದದ್ದು. ರಾಜ ಕಾರಣದಲ್ಲಿ ಅದು ಆತ್ಮಹಿತ ವಿರೋಧಿಯಾಗುವುದು. ಹರಟೇ ಮಲ್ಲನಾದವನಿಗೆ ಯಾವಾಗಲೂ ಹೊಗಳಿಕೆ ಸಿಕ್ಕದು. ನಿಲವುಗೆಟ್ಟ ನಾಲಿಗೆಯಿಂದ ರಾಜಕಾರ ಣಿಯು ತನ್ನ ಅರಿವುಗೇಡಿತನವನ್ನು ತೋರಿಸುವನು. ಆಗಾಗ್ಗೆ ಬಾಯಿಕಲ್ಲೀ ಹಾಕುವ ಸಂಕಲ್ಪನನ್ನು ನಾವು ಮಾಡಲೇಬೇಕು. ಕೆಲವರಿಗೆ ಉಪನ್ಯಾಸಗಳನ್ನು ಕೇಳದಿದ್ದರೆ ಉಂಡಂತಾಗುವುದಿಲ್ಲ ಉಟ್ಟಂತಾಗುವುದಿಲ್ಲ. ಮನಸ್ಸಿಗೆ ಸೊಗಸೆನ್ನಿ ಸುವುದಿಲ್ಲ. ಮತ್ತೆ ಕೆಲವರಿಗೆ ನಿತ್ಯ ಕೆಲವು ವೇಳೆ ಬಾಯಿ ಹರಿಬಿಟ್ಟು ಮಾತಾಡ ದಿದ್ದರೆ ನಿದ್ದೆ ಬಾರದು. ಇವೆಲ್ಲ ದುರಭ್ಯಾಸಗಳೇ ಸರಿ. ಅತಿ ಸರ್ವತ್ರ ವರ್ಜಯೇತ್. ವಾಗ್ಮಿಯು ಸರಳವಾಗಿರಬೇಕು, ವಿರಳವಾಗಿ ಮಾತಾಡಬೇಕು. ಹೇರಳವಾಗಿ ಹರಟಬಾರದು. ಹತ್ತೇ ಮಾತುಗಳಾಡಿದರೂ ಅಡ್ಡಿಯಿಲ್ಲ. ಅವು ಮುತ್ತುಗಳೇ ಆಗಬೇಕು. ಜ್ಞಾನದ ಕಿಡಿಗಳೇ ಆಗಬೇಕು. ಬುದ್ಧಿಯನ್ನು ತಳಮಳಿಸಿ ವಿಚಾರಕ್ಕೆ ಅಣಿಮಾಡುವಂತೆ ಮಾತಾಡಬೇಕು. ಮಾನವನು ಆಲಸ್ಯ ದಿಂದ ಉರುಳುವುದನ್ನು ಬಿಡಿಸಬೇಕು. ಕಾರ್ಯಕ್ಕೆ ಹೊರಳುವಂತೆ ಮಾಡ ಬೇಕು. ಬರಿ ಬಾಯ್ಮಾತಿಗಾಗಿ ಹರಟುವುದು ಹೀನತನವು !

ಈ ವಾಚಾಲತನವ ದೋಷವು ಮಹಮ್ಮದ ಅಲ್ಲೀ ಮತ್ತು ಶ್ರೀನಿವಾಸ ಯ್ಯಂಗಾರರಂಥ ಮಾನ್ಯ ಮುಂದಾಳುಗಳನ್ನು ಸಹ ತತ್ತರಿಸಿಬಿಟ್ಟಿದೆ.

ಜವಾಹರಲಾಲರಿಗೆ ಕೀರ್ತಿಕಾಂಕ್ಷೆಯಿಲ್ಲ. ನಿಷ್ಕಾಮ ಕರ್ಮವೇ ಅವರ ಆದರ್ಶ. ಘನತೆಗೌರವಗಳು ಅವರ ಕರ್ಮಕೌಶಲ್ಯದ ಅಡಿಯಾಳುಗಳು. ಕೈಜೋಡಿಸಿ ನಿಂತ ತೊತ್ತುಗಳು. ಅವರು ಸಾಮಾನ್ಯರಂತೆ ಸನ್ಮಾನ ಸಂಪಾ ದನೆಗಾಗಿ ಸಾಧನೆ ಮಾಡುವವರಲ್ಲ. ಆದ್ದರಿಂದಲೇ ದೇಶದ ಮುಂದಾಳುಗಳ ಅನೈಕ್ಯವನ್ನೂ ಮತಭೇದಗಳನ್ನೂ ಕಂಡು ಅವರು ವಿಶಾಲವಾದ ಲೋಕಾಂತ ವನ್ನು ತೊರೆದು ಮೆಲ್ಲಗೆ ಏಕಾಂತವಾಸವನ್ನು ಬಯಸಿದರು. ಅದರಂತೆ ೧೯೩೩

ರಿಂದ ೧೯೨೭ ರ ವರೆಗೆ ಕೊಂಗ್ರೆಸಿನ ಕಾರ್ಯದರ್ಶಿಗಳಾಗಿಯೂ ಪ್ರಯಾಗ ನಗರದ ಅಧಿಪತಿಗಳಾಗಿಯೂ ಅವರು ಕೆಲಸ ಮಾಡಿದರು. ಅಸಹಕಾರದ ಆರಂಭದಲ್ಲಿ ಅವರನ್ನು ಬೆನ್ನುಚಪ್ಪರಿಸಿ ಹೊಗಳಿದವರು ಅವರ ಕಾವಾರಿ ನಾಡಿನಲ್ಲಿ ಒಂದು ರೀತಿಯ ಮೌಢ್ಯವು ಮುಸುಕಿದಾಗ ಅವರನ್ನು ಅದಕ್ಕಿಂತ 'ಹತ್ತು ಪಟ್ಟು ತೆಗಳಿದರು. ಮೋತಿಲಾಲರ ಬುದ್ಧಿವೈಭವವು ಇವರಿಗೆ ಹೇಗೆ ಬಂದೀತೆಂದು ಕೆಲವರೆಂದರು. ಧರ್ಮಮೂಢರಿಗೊಪ್ಪುವ ಕ್ರೂರ ಸಾರಲ್ಯವು ಅವರಲ್ಲಿದೆಯೆಂದು ಹಲವರೆಂದರು. ದೇಶಕ್ಕಾಗಿ ಶರೀರವನ್ನು ಸಿಲುಬೆಗೇರಿಸುವ ಸಿದ್ಧತೆಯುಳ್ಳವನೆಂದು ಬೇರೆ ಕೆಲವರೆಂದರು. ಲೋಕದಲ್ಲಿ ನಡೆದ ಸ್ತುತಿನಿಂದೆಗಳನ್ನು ಅವರು ಲೆಕ್ಕಿಸಲಿಲ್ಲ. ಧ್ಯೇಯವನ್ನು ನೆರೆ ನೋಡಿ, ಮನದಟ್ಟು ಮಾಡಿಕೊಂಡು ಒಳಗಿಂದೊಳಗೆ ತಳಮಳಪಟ್ಟು, ಕೊಂಗ್ರೆಸಿನ ಚಟುವಟಿಕೆಗಳಲ್ಲಿ ಪ್ರತ್ಯಕ್ಷವಾಗಿ ಹೆಚ್ಚು ಭಾಗ ವಹಿಸದಿದ್ದರೂ ತನ್ನ ಮನಕ್ಕೆ ಮೆಚ್ಚಿದಂತೆ ಬೇರೆ ಕ್ಷೇತ್ರಗಳಲ್ಲಿ ಕೆಲಸ ಮಾಡತೊಡಗಿದರು. ಮುಂವೆ ಮದ್ರಾಸ ಕೊಂಗ್ರೆಸಿನಲ್ಲಿ ತನ್ನ ಸ್ಥಾನಮಾನಗಳನ್ನು ಜನರ ನಿದರ್ಶಕ್ಕೆ ತಾರದೆ ಬಿಡಲಿಲ್ಲ. ಒಮ್ಮೆ ತನ್ನ ಮನಸ್ಸಿಗೆ ಒಪ್ಪಿ ಒಂದು ಮಾರ್ಗವನ್ನು ಹಿಡಿವರೆ ಅವರು ಆ ಮೇಲೆ ಯಾರ ಮಾತಿಗೂ ಸೊಪ್ಪುಹಾಕುವವರಲ್ಲ. ಕಾರ್ಯಕ್ರಮಗಳನ್ನು ಹೆಚ್ಚು ಕಡಿಮೆ ಮಾಡಿ ಬೇರೆ ಬೇರೆ ಪಂಗಡದವರಲ್ಲಿ ಪ್ರೇಮವನ್ನುಳಿಸಲು ಅವರು ನಿತ್ಯ ಸಿದ್ಧರು. ಆದರೆ ಆದರ್ಶದಲ್ಲಿ ತಿಲಮಾತ್ರವಾದರೂ ಭೇದವಾಗಲಾರದೆಂದು ಅವರ ನಿಶ್ಚಿತ ಮತ. ಆದ್ದರಿಂದಲೇ ಲಖನೌದಲ್ಲಿ ನೆರೆದ ನಿಖಿಲ ಭಾರತೀಯ ಸರ್ವಪಕ್ಷೀಯ ಸಭೆಯವರು ಸ್ವೀಕರಿಸಿದ ಸಾಮಂತ ಸ್ವರಾಜ್ಯದ ಧ್ಯೇಯದ ಧೋರಣಕ್ಕೆ ಅವರು ಸ್ಪಷ್ಟವಾಗಿ ಸಂಪೂರ್ಣ ವಿರೋಧವನ್ನು ಮಾಡಿದರು. ಅದಲ್ಲದೆ ಏನೂ ಮುಚ್ಚುಮರೆಯಿಲ್ಲದೆ ತಮ್ಮ ಸಮಾಜಸತ್ತಾವಾದದ (Socialistic) ಅಭಿಪ್ರಾಯಗಳನ್ನು ಘಂಟಾಘೋಷವಾಗಿ ಆಡಿ ತೋರಿಸಿದರು. ಅವರು ಮಾತಾಡುತ್ತಿರುವಾಗಲೇ ಒಬ್ಬ ಸಭಾಸದರು "ಹಾಗಾದರೆ **ಆನಂದಭವನ**ದ ಗತಿಯೇನು ?" ಎಂದು ಖಂಡತುಂಡಾಗಿ ತಾಗುವಂತೆ ಜವಾಹರಲಾಲರನ್ನು ಚುಚ್ಚಿ ಮಾತಾಡಿದರು. ನಮ್ಮ ತರುಣ ನಾಯಕರಲ್ಲಿ ಅದಕ್ಕೆ ಸಮರ್ಪಕವಾದ ಎದುರುತ್ತರವು ಇದ್ದೇ ಇತ್ತು. ನಾಡಿನ ನೆಮ್ಮದಿಗಾಗಿ ತಾನು ಯಾವ ತ್ಯಾಗವನ್ನೂ ಮಾಡುವೆನೆಂದು ಸಿದ್ಧವಾದ ವೀರನಿಗೆ "ಆನಂದಭವನ–"ವೊಂದು ಉಪಾಧಿಯಾದೀತೇ ?

ಸಾಮಂತಸ್ವರಾಜ್ಯದ ಘಟನೆಯು ನಮಗೆ ಎಂದಿಗೂ ಮಾನ್ಯವಿಲ್ಲ; ನಾವು ಸಂಪೂರ್ಣ ಸ್ವಾತಂತ್ರ್ಯವಾದಿಗಳಾದ್ದರಿಂದ ಸಭೆಯು ಈ ನಿರ್ಣಯದೊಂದಿಗೆ ನಮ್ಮದೇನೂ ಸಂಬಂಧವಿಲ್ಲೆಂದು ಅವರು ನಿಸ್ಸಂದೇಹವಾಗಿ ಸಾರಿ ಹೇಳಿದರು. ಇದರ ಮೇಲಿಂದ ಅವರೆಂಥ ತತ್ತ್ವನಿಷ್ಠರೆಂಬದು ತಿಳಿಯುವುದು.

---

## ಸಮಾಜಸತ್ತಾವಾದ ( Socialism )

ಜವಾಹರಲಾಲರು ಗಟ್ಟಿಮುಟ್ಟು ಸಮಾಜಸತ್ತಾವಾದಿಗಳಿರುವರೆಂಬದು ಅವರ ಅನೇಕ ಬರೆಹಗಳಿಂದಲೂ ಭಾಷಣಗಳಿಂದಲೂ ತಿಳಿದು ಬರುವುದು. ಜಗತ್ತಿನಲ್ಲಿ ನಡೆದ ಎಲ್ಲ ಅನರ್ಥ ಅಪಾಯಗಳಿಗೂ ಸಮಾಜದಲ್ಲಿರುವ ಆರ್ಥಿಕ ವಿಷಮತೆಯೇ ಮೂಲ ಕಾರಣವೆಂದೂ ಅದನ್ನು ಕೀಳುವತನಕ ಕಲ್ಯಾಣವಾಗದೆಂದೂ ಅವರ ಖಂಡಿತ ಸಿದ್ಧಾಂತ.

ಸಮಾಜವೆಂದರೆ ಅದಕ್ಕೇನಾದರೊಂದು ಸ್ಥಿರವಾದ ಸ್ಥಿತಿಯೂ ಸುರಕ್ಷಿತೆಯೂ ಬೇಕು. ಜಗತ್ತಿನಲ್ಲಾದ ಕ್ರಾಂತಿಗಳೆಲ್ಲವೂ ಬಹು ಜನರ ಬಹು ಸುಖವನ್ನು ಗಳಿಸುವುದಕ್ಕೇ ಆದವು. ಬರಿ ಮೋಜಿಗಲ್ಲ. ತೋಳ್ತೀಟೆಯನ್ನು ತೀರಿಸುವುದಕ್ಕಲ್ಲ. ಎಂದಿನವರೆಗೆ ಜಗದಲ್ಲಿ ಸರ್ವತ್ರ ಸುಸ್ಥಿತಿಯುಂಟಾಗಿಲ್ಲವೋ ಅಂದಿನವರೆಗೂ ಕ್ರಾಂತಿಶಾಂತಿಗಳು ಒಂದರ ಹಿಂದೊಂದು ಚಕ್ರನೇಮಿಕ್ರಮೇಣ ತಿರುಗುವುದೇ ಸರಿ. ಆದರಲ್ಲಿ ಕ್ರಾಂತಿ ಧ್ವಜವನ್ನೆತ್ತಿ ದೋಲಾಯಿಸುವ ದರ್ಪವು ತರುಣರ ತಂಡಕ್ಕೆ ಸೇರಿದುದು. ಇಂದಿನ ಪ್ರಪಂಚದಲ್ಲೇನು ತೋರುವುದು ? ಹಿಡಿತುಂಬ ಜನರು ಹೌಸಿನಿಂದ ಐಷ ಆರಾಮದಲ್ಲಿ ಹೊರಳಾಡುತ್ತಿರುವರು. ಹಲವು ಜನರು ಹೊಟ್ಟೆ ಬಟ್ಟೆಗೆ ಗತಿಯಿಲ್ಲದೆ ಶಿಕ್ಷಣಸೌಲಭ್ಯಗಳಿಲ್ಲದೆ ತಳಮಳಿಸುತ್ತಿರುವರು ! ಜಗತ್ತಿನ ಅವಸ್ಥೆಯು ಹೀಗಿರುವಾಗ ಭಾರತದ ಬನ್ನವನ್ನು ಹೇಳಲಿಕ್ಕೇ ಬೇಡ. ಹೆರವರಾಳಿಕೆಯಿಂದ ನಮ್ಮಲ್ಲಿ ದಾರಿದ್ರ್ಯವೂ ದೈನ್ಯವೂ ದಾಸ್ಯವೃತ್ತಿಯೂ ಬೆಳೆದು ಹೋಗಿದೆ. ಇತ್ತ ಸಾಮಾಜಿಕ ಸೂತ್ರಗಳ ದಬ್ಬಾಳಿಕೆಯಿಂದ ಗುಣಗಳಡಗಿ ಧರ್ಮಸಂಕೇತಗಳ ಹೆಣಪೂಜೆಯೇ ನಡೆದಿದೆ. ಕೀಳು ಮೇಲು ಕಲ್ಪನೆಗಳು ಮೇರೆ ಮೀರಿ ಬೆಳೆದು ಸಂಘಶಕ್ತಿಯು ಕಳೆದುಹೋಗಿದೆ. ಸ್ತ್ರೀಪುರುಷರು ಸತ್ತ್ವಗೇಡಿಗಳೂ ತಿಳಿಗೇಡಿಗಳೂ ಆಗಿರುವರು. ಮೇಲೆ

ಮುಟ್ಟಬೇಡತನವೆಂಬ ಮುತ್ತಾಳುತನ ! ಸಾಲುದುದಕ್ಕೆ ಸಾವಿರಾರು ಮತ ಮತಾಂತರ ಪಂಥಪಂಗಡಗಳು !! ಹಟಮಾರಿಗಳಾದ ಮಠಾಧಿಪರು ! ಇರಲಿ. ಭಾರತವನ್ನು ಇಂಥ ಬೀಳುಸ್ಥಿತಿಯಿಂದೆತ್ತಿ ಪುನಃ ಎಂದಿನಂತೆ ಸುಖಸಾಮ್ರಾಜ್ಯವನ್ನು ಸ್ಥಾಪಿಸುವುದೆಂತು ?

ಹಿಂದುಸ್ಥಾನದಲ್ಲಿ ಬ್ರಿಟಿಷ ಸಾಮ್ರಾಜ್ಯಸತ್ತೆಯು ನಡೆಯುತ್ತದೆಂದು ನೀವು ಅದರ ನಿಷೇಧವನ್ನು ಮಾಡುತ್ತ ಬಂದಿರುವಿರಿ. ಆದರೆ ಜಗತ್ತಿನಲ್ಲಿ ಪ್ರಚಲಿತವಾಗಿರುವ ಸಮಾಜವ್ಯವಸ್ಥೆಗೆ ಬಂಡವಾಳವೇ ಬುಡವು. ಕುಬೇರತನದ ಕೈಯೊಳಗೇ ಸಮಾಜದ ಆಟಕೂಟಗಳೆಲ್ಲ ನಡೆಯುವವು. ಬಂಡವಾಳದ ಬಡಾಯಿಯೇ ಬಡಾಯಿ. ಅದು ಮಾಡಿದ್ದೇ ಧೋರಣ, ಕಟ್ಟಿದ್ದೇ ತೋರಣ ! ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಂಪಾದಿಸಬೇಕೆಂಬುದು ಸದ್ಯದ ಧ್ಯೇಯವಿರಬಹುದು. ಆದರೆ ಸಾಮ್ರಾಜ್ಯಮದವು ಮಣ್ಣು ಮುಕ್ಕುವತನಕ, ಕುಬೇರತನವು (Capitalism) ಬಕ್ಕಬೋರ್ಲೆ ಬೀಳುವತನಕ ಜಗಕ್ಕೆ ಶಾಂತಿ–ತುಷ್ಟಿ–ಪುಷ್ಟಿಗಳಿಲ್ಲ. ಕುಬೇರತನವನ್ನು ಬೇರು ಸಹಿತ ಕಿತ್ತೊಗೆಯದೆ ನಮಗೆ ನಿದ್ದೆ ಬರಲಾಗದು. ಸಮಾಜ ಸಂಘಟನೆಯನ್ನು ಸಹಕಾರದ ಅಂದರೆ ಸಮಾಜಸತ್ತಾವಾದದ ತತ್ವದಂತೆ ಮಾಡುವುದೇ ಮೇಲು. ನಮ್ಮ ದೇಶದಲ್ಲಿ ಸಮಾಜ ಸತ್ತಾವಾದೀ ಲೋಕಸತ್ತಾತ್ಮಕ ಪದ್ಧತಿಯೂ ಮತ್ತು ಜಗದಲ್ಲಿ ಲೋಕಸತ್ತಾತ್ಮಕ ರಾಜ್ಯಸಂಘಗಳ ನಿರ್ಮಾಣವೂ ನಮ್ಮ ಗುರಿಯು. ಈ ಆದರ್ಶಗಳನ್ನು ಕೈಗೂಡಿಸಲು ಸಾಮಾಜಿಕ ಮತ್ತು ರಾಜಕೀಯ ಶತ್ರುಗಳೊಡನೆ ನಾವು ಹೆಣಗಬೇಕಾಗುವುದು.

ಹಾಗಾದರೆ ಸಮಾಜಸತ್ತಾವಾದವೆಂದರೇನು ? ಲೋಕ ಸತ್ತಾತ್ಮಕ ರಾಜ್ಯ ಪದ್ಧತಿಯ ಅಂತಿಮಾಂಶವೇ ಸಮಾಜಸತ್ತಾವಾದ. ಏಕೆಂದರೆ ಲೋಕಸತ್ತಾತ್ಮಕ ಪದ್ಧತಿಯಲ್ಲಿ ಸರ್ವಜನರಿಗೂ ಮತದಾನ ಸ್ವಾತಂತ್ರ್ಯವಿದೆ (Universal Sufferage) ರಾಜ್ಯದಲ್ಲಿ ಬಡಜನರೇ ಬಹು ಸಂಖ್ಯಾಕರು. ಅಂದಬಳಿಕ ಅವರು ತಮ್ಮ ಸಂಘಶಕ್ತಿಗಳನ್ನು ಬೆಳಿಸಿಕೊಂಡರೆ ರಾಜ್ಯತಂತ್ರಗಳು ಅವರನ್ನೇ ಸೇರುವುದರಲ್ಲಿ ಸಂದೇಹವೇನು ? ಇಂದು ಲೋಕದಲ್ಲಿ ಬಡ ಶ್ರಮ ಜೀವಿಗಳ ಕೇಡುಕಲ್ಯಾಣಗಳನ್ನು ಲೆಕ್ಕಿಸದೆ, ಮನಬಂದಂತೆ ರಾಜ್ಯದಂಡವನ್ನು ನಡೆಸುತ್ತಿ

ರುವ ಹಿಡಿತುಂಬ ಬಂಡವಾಳಗಾರರ ಹುಟ್ಟಡಗಿಸಿ,ಬಹು ಜನರಾದ ಬಡವರ ಹಿತ ಗಳನ್ನು ಹೊರುವ ರಾಜ್ಯತಂತ್ರದ ನಿರ್ಮಾಣವಾದರೆ ಅದರಲ್ಲೇನು ಆಶ್ಚರ್ಯ ? ಆದ್ದರಿಂದ ಸಮಾಜಸತ್ತಾವಾದವೆಂದರೆ ಬೇರಿನ್ನೇನೂ ಅಲ್ಲ. ಕೇಂದ್ರದಲ್ಲಿರುವ ಲೋಕಸತ್ತಾತ್ಮಕ ರಾಜ್ಯಪದ್ಧತಿಯು ಕಾರ್ಯಬಲದಿಂದ ದೇಶದಲ್ಲಿರುವ ಸರ್ವ ಸಂಪತ್ತಿನ ಉಗಮಸ್ಥಾನಗಳಾದ ಭೂಮಿ, ದೊಡ್ಡ ದೊಡ್ಡ ಕಾರಖಾನೆಗಳೇ ಮೊದಲಾದವುಗಳನ್ನು ಸರಕಾರಕ್ಕೆ ಸೇರಿಸಿ, ಉತ್ಪತ್ತಿಯನ್ನು ಊರ್ಜಿತಗೊಳಿಸಿ ಅದನ್ನು ಸರ್ವಸಮಾಜದಲ್ಲಿ ಸರಿಯಾಗಿ ಹಂಚುವುದೇ ಈ ಪದ್ಧತಿಯ ರಹಸ್ಯವು.

ಇಂಥ ಹೊಸ ರೀತಿಗಳನ್ನು ರಾಜ್ಯಾಂಗದಲ್ಲಿ ಸೇರಿಸಲು ಸದ್ಯಕ್ಕೆ ಅಧಿಕಾರ ಶ್ರೇಣಿಯಲ್ಲಿ ಕುಳಿತವರು ಬಿಡುವರೆ ? ದೇಶದ ಕುಬೇರರು ಸುಮ್ಮನಿರುವರೇ ? ಇವರೆಲ್ಲ ನಮ್ಮ ವಿರೋಧ ಪಕ್ಷದವರು. ಆದ್ದರಿಂದಲೇ ಲೋಕ ಪ್ರತಿನಿಧಿಗಳು ನಡೆಸಿದ ಸಾಮಾಜಿಕ ಸುಧಾರಣೆಗಳನ್ನು ಸರಕಾರವು ಮೂಲೆಗುಂಪು ಮಾಡು ತ್ತದೆ. 'ಸಾರ್ವಜನಿಕ ರಕ್ಷಾ' ' Public safety ' ಬಿಲ್ ಚರ್ಚೆಗೆ ಬಂ ದಾಗ ಈ ದೃಶ್ಯವು ನಿಚ್ಚಳವಾಗಿ ಕಾಣುತ್ತಿತ್ತು. ಹಿಂದುಸ್ಥಾನ ಸರಕಾರಕ್ಕೆ ಹಿಂದೂ ಮುಸಲ್ಮಾನ ಧರ್ಮಗಳ ಬಗ್ಗೆ ಕಳಕಳಿಯುಂಟಾಯಿತು. ಸರಕಾರದವರು ಶುದ್ಧೀ ಮತ್ತು ತಬಲೀಕ ಚಳವಳಗಳ ಪಕ್ಷ ವಹಿಸಿ ಆ ಬಿಲ್ ಪಾಸಾಗಲಿಕ್ಕೇ ಬೇಕೆಂದು ಹಟಹಿಡಿದರು. ಸ್ವಾರ್ಥಕ್ಕೋಸ್ಕರ ಧರ್ಮಗಳಿಗೆ ಬೆಂಬಲ ! ತಾವು ಧರ್ಮಪರಿಪಾಲಕರೆಂದು ಮೇಲೆ ಜಂಬ ಬೇರೆ ! ಧರ್ಮೋಪದೇಶಕರೂ ತಮ್ಮ ಧಾರ್ಮಿಕ ಅಧಿಕಾರವನ್ನೇ ಹೇಳುತ್ತಾರೆ. ದುಃಖದೈನ್ಯಗಳಲ್ಲಿ ನರಳುವವರಿಗೆ ಅದು ಅವರ ಕರ್ಮಸಂಚಿತ ಫಲವೆಂದು ಹೇಳಲಾಗುತ್ತದೆ. ಧರ್ಮಸಂಸ್ಕೃತಿ ಗಳ ನೆವದಿಂದ ಹೆಂಗಸರನ್ನು ಹುದುಗಿಸಿಡಲಾಗಿದೆ. ಅದೇ ಧರ್ಮದ ಶುಭನಾ ಮದಿಂದಲೇ ಅಸ್ಪೃಷ್ಟರನ್ನು ದೂರವಿರಿಸಿ ತಿಳಿಗೇಡಿತನದಲ್ಲಿ ತಳ್ಳಿಡಲಾಗಿದೆ ! ಧರ್ಮದ ಭೇರಿಯಿಂದ ಇದೆಲ್ಲ ಅನರ್ಥ ಪರಂಪರೆಯು ಜಾರಿಯಲ್ಲಿ ಬಂದಿದೆ. ಧರ್ಮರೂಢಿಗಳ ದಬ್ಬಾಳಿಕೆಯನ್ನು ಕಿತ್ತೊಗೆಯಬೇಕೆಂದು ಪ್ರಯತ್ನ ಪಟ್ಟರೆ ತಮ್ಮ ಭದ್ರತೆಯ ಬುಡವು ಅದರುವುದೆಂದು ಹೆದರಿ ಸರಕಾರದವರು ಸಮಾಜ ಸುಧಾರಣೆಯ ಉಪಕ್ರಮವನ್ನು ಸಹ ನಡೆಸುಗೊಡುವುದಿಲ್ಲ. ಧರ್ಮರೂಢಿ ಗಳ ವಿರುದ್ಧ ಬಂಡೇಳದಂತೆ ಜಪ್ಪಿಸಿಕೊಂಡಿರುವರು.

ಪರಕೀಯರ ಪ್ರಾಬಲ್ಯವು ನಮ್ಮಲ್ಲಿ ನಡೆದಿರುವುದರಿಂದ ನಮ್ಮ ನೋಟ ವೆಲ್ಲ ಸದ್ಯಕ್ಕೆ ಅವರ ಮೇಲೆಯೇ ಇರುವುದು ಸ್ವಾಭಾವಿಕವಾಗಿದೆ. ನಾವೀಗ ರಾಷ್ಟ್ರೀಯ ಸ್ವಾತಂತ್ರ್ಯಕ್ಕೋಸ್ಕರ ಹೋರಾಡುತ್ತಿದ್ದೇವೆ. ಆದರೆ ಅರೆಹೊಟ್ಟೆ ಯಿಂದಳುತ್ತಿರುವ, ತುಣುಕು ರೊಟ್ಟಿಗಾಗಿ ತಳಮಳಿಸುವ ಮತ್ತು ದಾರಿದ್ರ್ಯದಲ್ಲಿ ದಬ್ಬಲ್ಪಟ್ಟ ಕೂಲಿಕಾರರಿಗೂ ಬಡವರಿಗೂ ರಾಷ್ಟ್ರೀಯತ್ವವು ಹೇಗೆ ಹೊಳೆದೀತು? "ಮೊದಲು ಹೊಟ್ಟೆಪ್ಪ ಮತ್ತೆ ವಿಶ್ವಪ್ಪ" ನೆಂದು ಅವರ ಕೂಗು! ಆವರೂ ಶ್ರಮಜೀವಿಗಳ ಕೊನೆಯು ಸ್ವಾತಂತ್ರ್ಯಸಂಗ್ರಾಮದೊಡನೆ ನಿಗಡಿತವಾಗಿದೆ. ಅವರಿಗಾದರೂ ದೇಶವು ಸ್ವತಂತ್ರವಾಗದೆ ಏನನ್ನೂ ಮಾಡಲಿಕ್ಕೆ ಸಾಧ್ಯವಿಲ್ಲ. ಸರಕಾರದ ದಯಾಮಾಯೆಗಳಿಂದ ಅವರ ಸ್ಥಿತಿ ಸುಧಾರಿಸದು. ಕೂಲಿಕಾರರ ಕೇಡಿನ ಕಾರಣವು ಸದ್ಯದ ಸಮಾಜಪದ್ಧತಿಯಲ್ಲಿಯೇ ಮೂರ್ತಿಮಂತವಾಗಿದೆ. ಬಹು ಜನರ ಬೆವರಿನ ಮೇಲೆ ಕೆಲ ಜನರು ಕೊಬ್ಬುವುದೇ ಅದರ ಕಾರಣವು! ಈ ಪದ್ಧತಿಗೆ ಸದ್ಯದ ಸಾಮ್ರಾಜ್ಯವೂ ಸಮಾಜಗಳೂ ತಳಹದಿಗಳು. ಮುಂಚೆ ಈ ತಾಳತಪ್ಪಿದ, ಎಲ್ಲೆಯಿಲ್ಲದ ಸಾಮ್ರಾಜ್ಯಮದನನ್ನಷ್ಟು ಹಣಿದು ಮೆತ್ತಗೆ ಮಾಡ ಬೇಕು. ಆದ್ದರಿಂದ ಕೂಲಿಕಾರರು ಮೀನಮೇಷಮಾಡದೆ ಸ್ವಾತಂತ್ರ್ಯಸಮರ ದಲ್ಲಿ ಧುಮುಕಬೇಕು. ತಮ್ಮ ರಟ್ಟೆಯು ರೊಟ್ಟಿಯಿಂದ ಮೈಮುರೆದು ಕಾಪಬೇಕು. ಸೇನಾಪತಿಗಳ ಸಲಹೆಗಳಂತೆ ಶಾಂತ ಸತ್ಯಾಗ್ರಹವನ್ನು ಕೈಕೊಳ್ಳಬೇಕು. ತರು ಣರು ಹರೆಯುದೆದೆಯ ಹೆದೆಯುನೇರಿಸಿ ಮುಂದರಿಯುಬೇಕು. ಮತ್ತು ಸ್ವಾತಂತ್ರ್ಯ ಸಂಪಾದನೆಯಾದ ಕೂಡಲೆ ತಮ್ಮ ಕಾರ್ಯವು ಕೊನೆಗಂಡಿತೆಂದು ಅವರು ತಿಳಿಯು ಲಾಗದು. ಏಕೆಂದರೆ ಸಾಮ್ರಾಜ್ಯದ ಸದ್ದಡಗಿದರೂ ಸಮಾಜದೊಡನೆ ಅವ ರಿಗೆ ತಮ್ಮ ಬಾಳನ್ನು ಭದ್ರಪಡಿಸಲು ಇನ್ನೊಂದು ಕಾಳಗವನ್ನು ಹೂಡಬೇಕಾ ದೀತು. ಏಕೆಂದರೆ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕು ತಮಗೇನು ದೊರಕೀತು? ಒಂದು ವೇಳೆ ಕೆಂಪು ಜನರ ಕಾರಭಾರದ ಬದಲು ಕಪ್ಪು ಜನರದು ನಡೆಯು ಬಹುದು. ಆದರೆ ಪ್ರಭುತ್ವವು ಪಲ್ಲಟಿಸಿದರೆ ತಮ್ಮ ಗೋಳಿನ ಕೊನೆಯಾಗು ವುದೇ? ಕೆಲವು ಹಿಂದೀ ಜನರಿಗೆ ಹಿಡಿತುಂಬ ಹಣವು ಸಿಕ್ಕೀತು; ನಿಮ್ಮ ಕಷ್ಟ ಗಳು ಕಡೆಗಾಣುವವೇ? ಸತತ ಶ್ರಮಮಾಡಿ ಶರೀರ ಸವಿಸಿ, ಕೂಳುಗಾಣದೆ ಕಷ್ಟ ಬಟ್ಟು, ನಿಮ್ಮ ಬಲಗುಂದಿ ಹೊಚ್ಚ ಹರೇತನದಲ್ಲಿಯೇ ಬಾಳ್ವೆಯ ಸೊಗಸು ಸಡಗರಗಳಿಗೆಲ್ಲ ಸೊನ್ನೆಯಾಯಿತೆಂದರೆ ಅಂಥ ಸ್ವಾತಂತ್ರ್ಯದಿಂದ ನಿಮಗೇನು?

ಹೊಟ್ಟೆಬಟ್ಟೆಗಳಿಗೆ ಸಾಕಷ್ಟು ಸಿಕ್ಕು ಬೆಳೆವಣಿಗೆಗೆ ಸರ್ವರಿಗೂ ಸಮ ಸಂದರ್ಭ ಗಳು ದೊರಕಬೇಕೆಂದೇ ನೀವು ಹೇಳುವುದು. ಅದು ಈಗಿನ ಅಧಿಕಾರಾರೂಢವಾದ ಕುಬೇರತನದ ಕೊಬ್ಬಿನ ಸಮಾಜದಿಂದ ಸಿಕ್ಕದು ! ದುಡ್ಡಿನ ದರ್ಪದಿಂದ ದಬ್ಬಾಳಿಕೆ ನಡೆಸುವ ಶ್ರೀಮಂತ ಸಮಾಜವೇ ದೇಶದ ಮುನ್ನಡೆಯಲ್ಲೊಂದು ಮಹತ್ತ್ವದ ತೊಡರು. ಆದ್ದರಿಂದ ಇಂದು ಜಗದಲ್ಲಿ ಎಲ್ಲೆಲ್ಲಿಯೂ ಕೂಲಿಕಾರರಿಗೂ ಕುಬೇರರಿಗೂ ಕೈಗೆ ಕೈ ಹತ್ತಿದೆ. ಶ್ರಮಜೀವಿಗಳೆಲ್ಲ ಸಮಾಜಸತ್ತಾವಾದದ ಪ್ರೇಮ ನೇಮ ಗಳನ್ನು ತಿಳಿದು ಹೊಸ ಸಮಾಜರಚನೆಯಲ್ಲಿ ಬದ್ಧಾದರರಾಗಿ ನಿಲ್ಲಹತ್ತಿದ್ದಾರೆ !

ಈಗಾಗಲೇ ರಶಿಯಾದೇಶದ ಬಡ ಜನರು ತಮ್ಮ ಕಷ್ಟನಷ್ಟಗಳನ್ನು ಬಗೆ ಹರಿಸುವುದಕ್ಕಾಗಿ ಎಲ್ಲರೂ ಒಂದುಗೂಡಿ ನಾಡಿನಲ್ಲಿ ಹುಯಿಲೆಬ್ಬಿಸಿ ಝಾರಶಾಹಿ ಯನ್ನು ಜರ್ಜರಿತಮಾಡಿ ನಿರ್ಮೂಲಿಸಿ ಸಮಾಜಸತ್ತ್ಯಾತ್ಮಕ ರಾಜ್ಯಪದ್ಧತಿಯನ್ನು ಕೈಕೊಂಡಿದ್ದಾರೆ. ಅಲ್ಲಿ ಸಂಪತ್ತಿನ ಸರ್ವಶ್ರೇಷ್ಠ ಉಗಮಸ್ಥಾನಗಳೆಲ್ಲವೂ ಸರ ಕಾರದ ಸೊತ್ತೆಂಬು ನಿರ್ಣಿತವಾಗಿದೆ. ಆದರೆ ಅದರಿಂದ ವ್ಯಕ್ತಿಸ್ವಾತಂತ್ರ್ಯವನ್ನು ನಾಶಪಡಿಸಿಲ್ಲ. ಮಾನವನು ಧನಜನಕನಾಗಿ ದುಡ್ಡು ದೌಲತ್ತುಗಳಿಂದ ಸುಖ ಸೌಲತ್ತುಗಳನ್ನುಣ್ಣದಂತೆ ಕಟ್ಟುನಿಟ್ಟುಗಳನ್ನೇನೂ ಮಾಡಿಟ್ಟಿಲ್ಲ. ಕೆಲವೊಂದು ಮೇರೆಯೊಳಗೆ ಪ್ರತಿಯೊಬ್ಬರಿಗೂ ಕೆಲವು ಸಂಪತ್ತಿನ ಮೇಲೆ ಯಾಜಮಾನ್ಯವಿರ ಬಹುದು ಮತ್ತು ಅದರ ಸಂಚಾಲನ ಸ್ವಾತಂತ್ರ್ಯವೂ ಇರಬಹುದು. ರಶಿಯಾ ದಲ್ಲಿ ನಡೆದ ಈ ಕಾರ್ಯದ ಬಗ್ಗೆ ನನಗೆ ಸಂಪೂರ್ಣ ಸಹಾನುಭೂತಿಯಿರುವುದಾ ದರೂ 'ತೃತೀಯ ಅಂತರರಾಷ್ಟ್ರೀಯ ಸಭೆಯು' (Third International) ಕಾರ್ಯಕಲಾಪಗಳನ್ನು ನಾನು ಎಷ್ಟೆಕ್ಕೂ ಒಪ್ಪಲಾರೆನು. ಚೀನ ಮತ್ತು ಬೇರೆ ಕೆಲವೆಡೆಗಳಲ್ಲಿ ಅದರ ಚಳವಳದಿಂದ ಭೇದಬುದ್ಧಿ ಹುಟ್ಟಿ ಒಳಜಗಳಗಳು ಪ್ರಾರಂ ಭವಾಗಿವೆ. ಆದ್ದರಿಂದ ಅದರೊಡನೆ ಸಹಕರಿಸಲು ನಾನು ಬಯಸುವುದಿಲ್ಲ. ಇರಲಿ. ಈಗ 'ಅಡಿಯ ಹಿಂದಿಡೆ ನರಕ ಅಡಿಯ ಮುಂದಿಡೆ ಸ್ವರ್ಗ' ವೆಂಬ ಆತ್ಯಾತುರದ ವೇಳೆಯೊದಗಿದೆ. ಬರಿಗೈಯಿಂದ ಮೊಳಹಾಕಿದರೆ ಬಟ್ಟೆ ಬಾರದು. ಆದ್ದರಿಂದ ಕೆಲಸಗಾರರೂ ಬಡವರೂ ತಮ್ಮ ತಳಮಳವನ್ನು ಕಾರ್ಯದಲ್ಲಿ ಕಾಣಿಸಬೇಕು. ಅರೆಹೊಟ್ಟೆಯಿಂದಲೂ ಅರೆಯುಡಿಗೆಯಿಂದಲೂ ಇರುವ ಸಂಬಳ, ಮನಸ್ಸಿಗೆ ಒಗ್ಗದೆ, ಕೇವಲ ಒತ್ತಾಯದಿಂದಲೇ ವಾಸಿಸಬೇಕಾದ ಹೊಲ್ಲ.

ಹೇಸಿಗೆಯ ಸ್ಥಳ ಆಗಾಗ ಸಂಭವಿಸುವ ಅಪಘಾತ, ಇಂಥ ಇರವಿನಿಂದುಟಾಗುವ ನೂರೆಂಟು ರೋಗರುಜಿನಗಳು–ಈ ಬೀಳುಸ್ಥಿತಿಯನ್ನು ಬಣ್ಣಿಸಲಳವಲ್ಲ. ಯಾರ ಕಾಯಕ್ಲೇಶ ಮತ್ತು ಬೆವರಿನ ವಿಶೇಷದಿಂದ ಉದ್ಯೋಗಗಳು ಊರ್ಜಿತವಾಗುವವೋ ಅವರಿಗೇ ನಿಶ್ಶೇಷ ನರಕ, ಹರಕು ಮುರಕು ಸಂಸಾರ. ಹೆರವರನ್ನು ಹುದುಗಿಸಿ, ಭೋಗಬಂಟರಾಗಿ ಮೆರೆವ ಈ ಕುಬೇರರು ದುಡಿವರನ್ನು ನಡೆಸುವ ಬಗೆಯ ಕಂಡರೆ, ಕಣ್ಣಿಗೆ ಕತ್ತಲೆ ಬರುತ್ತದೆ! ಇವರೆಲ್ಲ ಪಶುವಿಗಿಂತ ಕೀಳೆಂಬಂತೆ ಅವರ ನಡತೆ!! ಆದ್ದರಿಂದಲೇ ಕೂಲಿಕಾರರು ಅಲ್ಲಲ್ಲಿ ಮುಷ್ಕರಗಳನ್ನು ಮಾಡುತ್ತಿದ್ದಾರೆ. ಇಂಥ ಸಂದರ್ಭದಲ್ಲಿ ಅಖಿಲ ಭಾರತ ವ್ಯವಸಾಯ ಸಂಘದವರು ಹೆಚ್ಚು ಕಾರ್ಯಕ್ಷಮರಾಗಬೇಕು. ತಮ್ಮ ಪಡಿಪಾಟಲನ್ನು ಪಲ್ಲಟಿಸುವ ಚಟುವಟಿಕೆಗಳನ್ನು ಜೋರಿನಿಂದ ನಡೆಸಬೇಕು. ಭಾರತದ ಬಿಡುಗಡೆಯಾಗದೆ ತಮ್ಮ ಸ್ಥಿತಿಗತಿ ಸುಧಾರಿಸವೆಂಬುದನ್ನು ಮನದಟ್ಟು ಮಾಡಿ ಕೊಂಗ್ರೆಸಿನಲ್ಲಿ ಬೆರೆತು ಸ್ವಾತಂತ್ರ್ಯಸ್ಫೂರ್ತಿಯನ್ನು ತೋರಬೇಕು. ತಮ್ಮ ಕೇಡುಕಲ್ಯಾಣಗಳನ್ನು ಕೊಂಗ್ರೆಸಿನವರು ಚಿಂತಿಸುವಂತೆ ಗಂಟುಬೀಳಬೇಕು.

---

## ರಾಷ್ಟ್ರಪತಿ

ಸ್ಥೈರಣೆಯ ಮೂರ್ತಿಯೂ ಓಗಣೆಯ ಕೆಲಸಗಾರರೂ ಪಾಶ್ಚಾತ್ಯ ರಾಜ್ಯಕಾರಣದ ನೆಲೆಬೆಲೆಗಳನ್ನರಿತವರೂ ಭಾರತದ ರಾಜ್ಯಕಾರಣದಲ್ಲಿ ನುರಿತವರೂ ಕೆಚ್ಚೆದೆಯ ಉಚ್ಚ ವೀರರೂ ತ್ಯಾಗಿಗಳೂ ತತ್ತ್ವನಿಷ್ಠರೂ ಪ್ರೇಮಪ್ರತಾಪರೂ ಆದ ಜವಾಹರಲಾಲರಂಥ ಜಾಜ್ವಲ್ಯ ತರುಣರಿಗೆ ನಾಡಿನ ನೇತೃತ್ವವು ಒಪ್ಪಿಸಲ್ಪಟ್ಟರೆ ಅದರಲ್ಲೇನಾಶ್ಚರ್ಯ? ಹುಡುಗರಾಗಿದ್ದಾಗ, ಕನಸಿನಲ್ಲಿ ಹೊಯ್ದಾಡುತ್ತಿದ್ದುದು ಹರೆಯತನದಲ್ಲಿ ನನಸಾಗಿ ನಿಂತಿತು! ತಮ್ಮ ೧೪ನೆಯ ವರ್ಷದಲ್ಲಿ ಮುಂಬಯಿಯಲ್ಲಾದ ಅಧಿವೇಶನವನ್ನು ಅವರು ಮೊದಲು ನೋಡಿದ್ದು (೧೯೦೪) ಅಂದಿನಿಂದ ಇಂದಿನವರೆಗೂ ಕೊಂಗ್ರೆಸಿಗೆ ಅವರ ಸಂಬಂಧವಿದ್ದೇ ಇರುವುದು. ಆದರೂ ೧೯೨೯ರಿಂದ ಅಧ್ಯಕ್ಷರಾಗುವವರೆಗೆ ಅವರೇ ಕೊಂಗ್ರೆಸಿನ ಮುಖ್ಯ ಮಂತ್ರಿಗಳಾಗಿದ್ದರೆನ್ನಬಹುದು! ಅವರು ಕಾರ್ಯದರ್ಶಿಗಳಾಗುವ ಮುಂಚಿನ ಕೊಂಗ್ರೆ

ಸಿನ ಅವಸ್ಥೆಯೇ ಬೇರೆ. ವರ್ಷಕ್ಕೊಮ್ಮೆ ಊರ್ಮಿಯೆದ್ದಾಗ ನಾಲ್ಕು ದಿನ ಕೆಲಸಮಾಡಿ ಒರಗಿದರೆ ಮತ್ತೆ ಮತ್ತೊಂದು ವರ್ಷಕ್ಕೇ ಏಳುವುದು! ಆದರೆ ನಮ್ಮ ನಾಯಕರ ಕೈಗೆ ಕೊಂಗ್ರೆಸಿನ ಕಾರ್ಯನಿರ್ವಾಹವು ಬಂದಬಳಿಕ ಕೊಂಗ್ರೆಸಿಗೊಂದು ಕಳೆ ಬಂದಿತು. ಅದರ ಕೆಲಸಗಳಲ್ಲಿ ಓರಣೆಯೂ ನಿಯಮಿತತನವೂ ಉಂಟಾದವು. ದೊಡ್ಡ ಸರಕಾರದ ಸೆಕ್ರೆಟರಿಯೆಟ್ ನಡೆದಂತೆ ಅಲ್ಲಿಯ ಕಾರ್ಯಕಲಾಪಗಳು ಭರವಸೆಯಿಂದಲೂ ಗೌರವದಿಂದಲೂ ನಡೆಯಹತ್ತಿದವು. ಕೊಂಗ್ರೆಸೆಂದರೆ ಕುಂಭಕರ್ಣನ ಅವಸ್ಥೆಯಲ್ಲ, ಅದು ನಾಡಿನ ಬಿಡುಗಡೆಗಾಗಿ ಆತುರದಿಂದ ದುಡಿಯುವ ದಂಡಾಳುಗಳ ಕೂಟವೆಂಬುದು ದಿಟವಾಯಿತು!

ನಾಡಿನಲ್ಲಿ ಮಾನ್ಯ ಮುಂದಾಳುಗಳನೇಕರಿರುವರು. ಆದರೆ "ರಾಷ್ಟ್ರಪತಿ"ತ್ವವು ಎಲ್ಲರನ್ನೂ ಕೈಹಿಡಿಯದು. ರಾಷ್ಟ್ರದ ಹೃದಯ ಸಿಂಹಾಸನವನ್ನೇರಿದ ನರವೀರರಿಗೇ ಆ ಬಲುಹುಗಾರಿಕೆ. ಜವಾಹರಲಾಲರು ದೇಶದಲ್ಲಿ ಅನೇಕ ಪ್ರಕಾರದ ಚಳವಳಿಗಳನ್ನು ಮಾಡಿದರು. ಅವರು ಒಕ್ಕಲಿಗರ ಒಲವನ್ನು ಗಳಿಸಿದರು; ತರುಣರಲ್ಲಿ ತೇಜವನ್ನು ಬೆಳೆಸಿದರು; ಕೂಲಿಕಾರರಿಗೆ ತಮ್ಮ ಗೊತ್ತುಗುರಿಗಳನ್ನು ತಿಳಿಸಿದರು; ನಾಡಿನಲ್ಲಿ ಧರ್ಮ ಮತ್ತು ರೂಢಿಗಳ ಹೆಸರಿನಿಂದ ನಡೆಯುವ ಕ್ರೂರಕೃತ್ಯಗಳ ತಿಳಿವನ್ನು ಹುಟ್ಟಿಸಿ, ಹೊಸಕಾಲದ ಹೊಸ ವಿಚಾರಗಳನ್ನು ಹಬ್ಬಿಸಿದರು; ಸ್ವಾತಂತ್ರ್ಯಸಿದ್ಧಿಯ ಧ್ರುವಧ್ಯೇಯವನ್ನು ನಾಡಿನೆದುರಿಗಿಟ್ಟರು; ವಿಶ್ವಬಂಧುತ್ವದ ವಿಶಾಲ ಆದರ್ಶವನ್ನು ಹೊಳೆಯಿಸುವರು; ಆದ್ದರಿಂದಲೇ ರಾಷ್ಟ್ರವು ಅವರ ಗುಡಿಯ ಕೆಳಗೆ ಗುಂಪುಗೂಡಿತು. ಅಖಿಲ ಭಾರತ ಕೊಂಗ್ರೆಸ್ ಕಮಿಟಿಯವರು ಜವಾಹರಲಾಲರನ್ನು ಅಧ್ಯಕ್ಷರನ್ನಾಗಿ ಆರಿಸಿದ್ದು ಹೇಗೆ ಯಥಾಯೋಗ್ಯವಾಯಿತೆಂಬುದನ್ನು ಮಹಾತ್ಮಾ ಗಾಂಧಿಯವರು ಈ ಕೆಳಗಿನ ವಾಕ್ಯಗಳಿಂದ ಮುಕ್ತಕಂಠವಾಗಿ ಹೇಳಿದ್ದಾರೆ.

"ಪಂಡಿತ ಜವಾಹರಲಾಲ ನೆಹರುರವರ ಕೈಗೆ ರಾಷ್ಟ್ರದ ಸೂತ್ರಗಳನ್ನೊಪ್ಪಿಸಿದ್ದು ಬಹು ಭದ್ರವಾಯಿತು. ಇದರಿಂದ ಅಖಿಲ ಭಾರತ ಕೊಂಗ್ರೆಸ್ ಕಮಿಟಿಯು ತನ್ನ ಚೈತನ್ಯವನ್ನು ಚಮಕಿಸಿದಂತಾಯಿತು; ಜೀವಂತತನವನ್ನು ಜಾಹೀರ ಮಾಡಿದಂತಾಯಿತು. ಇನ್ನೂ ಚಿಕ್ಕವರಾದ ತರುಣರ ವಶಕ್ಕೆ ನಾಡಿನ ಚುಕ್ಕಾಣಿಯನ್ನು ಒಪ್ಪಿಸಿದ್ದು ಸರಿಯಾಗಲಿಲ್ಲೆಂದು ಕೆಲವರ ಮತ. ಆದರೆ ನನಗೆ ಹಾಗೆನಿ

ಸದು. ಈ ಸಮಯಕ್ಕೆ ನನ್ನಂಥ ಮುದಿಯೋಥನ ನಡುಗುವ ಕೈಯಲ್ಲಿ ನಾಡಿನ ನೇತೃತ್ವವು ಬಂದಿದ್ದರೆ ಒಳಿತಾಗುತ್ತಿರಲಿಲ್ಲ. ಈ ಹೊಣೆಗಾರಿಕೆಯನ್ನು ಜವಾಹರ ಲಾಲರ ಮೇಲೆ ಹೊರಿಸುವ ಮುಂಚೆಯೇ ನಾನು ಅವರನ್ನು ಕೇಳಿದೆನು. ಅವರು ಮುಂದಾಳುತನದ ಭಾರ ವಹಿಸಲು ಸಿದ್ಧರಿರುವರೋ ಇಲ್ಲವೋ ಎಂದು "ಒಂದು ವೇಳೆ ಅಂಥ ಪ್ರಸಂಗಬಂದರೆ ನಾನೇನೂ ಹಿಂಜರಿಯಲಿಕ್ಕಿಲ್ಲೆಂದು ತಿಳಿಯುತ್ತೇನೆ" ಎಂಬದಾಗಿ ಅವರು ತಟ್ಟನೆ ನುಡಿದರು. ಎದೆಗಾರಿಕೆಯಲ್ಲಿ ಅವರನ್ನು ಮೀರುವವ ರಿಲ್ಲ. ದೇಶಭಕ್ತಿಯಲ್ಲಿ ಅವರಿಗೆ ಸರಿಗಟ್ಟುವವರು ವಿರಳ. ಅವರಲ್ಲಿ ತಾರುಣ್ಯದ ತಳಮಳವೂ ಮುಂಗಾಲುಪುಟಿಕೆಯೂ ಇದೆಯೆಂದು ಹಲವರು. ಹೀಗಿರುವುದೇ ಸದ್ಯಸ್ಥಿತಿಗೆ ಅಗತ್ಯವೆಂದು ನನ್ನ ತಿಳುವಳಿಕೆ. ಅವರಲ್ಲಿ ವೀರರಿಗೊಪ್ಪುವ ಆತುರವೂ ಆವೇಶವೂ ಇರುವಂತೆ ರಾಜಕಾರಣಪಟುಗಳ ಗಾಂಭೀರ್ಯವೂ ವಿವೇಕವೂ ಇದ್ದೇ ಇವೆ. ಓರಣೆಯ ಬಿಗುವನ್ನು ಎಂದೆಂದಿಗೂ ಸಡಲಿಸದಂತೆ ಅವರು ಪ್ರೀತಿಸುವರು. ತನ್ನ ಸುತ್ತುಮುತ್ತಲಿನವರಿಗಿಂತ ಹೆಚ್ಚು ದೂರದೃಷ್ಟಿಯುಳ್ಳವರೂ ಆಗಿರುವರು. ಆದರೆ ಈ ಗುಣಗಳಿಂದ ಅವರೇನು ಬಿಂಕದಿಂದ ಬೀಗಿಹೋಗಿಲ್ಲ. ಕಾರ್ಯದ ವ್ಯವಹಾರ್ಯತೆಯನ್ನು ಅವರು ಚೆನ್ನಾಗಿ ವಿಮರ್ಶಿಸುತ್ತಾರೆ. ಅತ್ಯಂತ ಸತ್ಯವಂತರೂ ಅನಿಂದ್ಯರೂ ಸದಾ ವಂದ್ಯರೂ ಪರಮಪವಿತ್ರರೂ ಆಗಿದ್ದಾರೆ. ಅವರ ಕೈಯಲ್ಲಿ ನಾಡು ನೆಮ್ಮದಿಯಾಗಿರಬಲ್ಲದು !!" ಹೀಗೆಂದು ನಮ್ಮ ತರುಣ ನಾಯಕರ ಸಾಮರ್ಥ್ಯವನ್ನು ಕಂಡುಂಡ ಮಹಾತ್ಮರು ಅನೇಕ ಬಗೆಯಾಗಿ ಹೊಗಳಿದರು. ತೂಕ ನೋಡಿ ಎಚ್ಚರಿಕೆಯಿಂದ ಮಾತನಾಡುವ ಮಹಾತ್ಮರೇ ಹೀಗೆ ಮನವಿತ್ತಮೇಲೆ ಜವಾಹರಲಾಲರ ಕಾರ್ಯಕ್ಷಮತ್ವವೂ ಯೋಗ್ಯತೆಯೂ ಎಂತಹದಿರಬೇಕು ! ಓದುಗರೇ ಯೋಚಿಸಲಿ.

ಅಂತೂ ನಾಡಿನವರೆಲ್ಲ ನಲ್ಮೆಯಿಂದ ಜವಾಹರಲಾಲರನ್ನೇ ರಾಷ್ಟ್ರಸಭೆಯ ಅಧ್ಯಕ್ಷರನ್ನಾಗಿ ಆರಿಸಿದರು. ಇವರ ವಶಕ್ಕೆ ನೇತೃತ್ವನ್ನು ಕೊಟ್ಟು ರಾಷ್ಟ್ರವು ತರುಣರನ್ನು ಪುರಸ್ಕರಿಸಿತು. ಏಕೆಂದರೆ ಜವಾಹರಲಾಲರು ತರುಣರ ಕಣ್ಣು, ತೇಜ, ಬಾಹುಗಳ ಸ್ಫುರಣೆ. ಅವರು ಲಾಹೋರ್ ಕೊಂಗ್ರೆಸಿನ ಸಭಾಪತಿ ಸ್ಥಾನದಿಂದ ಹೀಗೆ ಮಾತನಾಡಿದರು. "ಇನ್ನು ಮುಂದೆ ಜಗತ್ತಿನ ಭವಿತವ್ಯತೆಯ ಸೂತ್ರಗಳು ಏಶಿಯಾ ಅಮೇರಿಕೆಗಳ ಕೈಗೆ ಹೋಗುವವು. ಅದರಲ್ಲಿ ಹಿಂದು

ಸ್ಥಾನವು ಬಹು ದೊಡ್ಡ ಕಾರ್ಯನಿರ್ವಾಹವನ್ನು ಮಾಡಬೇಕಾಗುವುದು. ಭಾರತಕ್ಕೆ ತನ್ನ ಸ್ವತಃ ಸಮಸ್ಯೆಗಳು ಎಷ್ಟು ಬಿಕ್ಕಟ್ಟಿನವಿದ್ದರೂ ಜಗವ ಸ್ಥಿತಿಯು ದುರ್ಲಕ್ಷ್ಯ ಮಾಡಿ ನಡೆಯುವಂತಿಲ್ಲ."

"ನಮ್ಮ ನಾಡಿನೆದರು ಥೈಥೈ ಎಂದು ಕುಣಿಯುತ್ತಿರುವ ಜಾತಿಭೇದದ ಭೂತವು ಸಾಮಾಜಿಕ ಮತ್ತು ಸಾಂಪತ್ತಿಕ ಪ್ರಶ್ನೆಯನ್ನು ಬಿಡಿಸಿದರೆ ನಾಶವಾಗುವುದು. ಜಾತಿಜಾತಿಗಳ ಮುಂದಾಳುಗಳಲ್ಲಿ ಪರಸ್ಪರರ ಬಗ್ಗೆ ಸಾಶಂಕವೃತ್ತಿಯೂ ಅವಿಶ್ವಾಸವೂ ಭಯವೂ ನೆಲೆಸಿಕೊಂಡಿದೆ. ಇವುಗಳ ಮೂಲವಳಿಯಲು ಮನವೊಲಿಸಬೇಕೆಂದು ಯುಕ್ತಿವಾದವನ್ನು ಹೂಡುವುದು ವ್ಯರ್ಥ. ನಮ್ಮಲ್ಲಿಯೇ ನಾವು ತಿಳಿದು ಔದಾರ್ಯದಿಂದ ಜಾತಿಜಗಳಗಳನ್ನು ಮುಕ್ತಾಯಮಾಡಬೇಕು."

"ಅಲ್ಪಸಂಖ್ಯಾಕರು ಹಟವನ್ನೇ ಹಿಡಿದರೆ ಅವರ ಹಕ್ಕುಗಳನ್ನು ಮುಳುಗಿಸುವವರಾರು? ಅಥವಾ ನಾವೀಗ ಅಲ್ಪಸಂಖ್ಯಾಕರ ಬೇಡಿಕೆಗಳನ್ನೆಲ್ಲ ಕೊಟ್ಟೆವೆಂದು ತಿಳಿಯಿರಿ. ನ್ಯಾಯಮಂಡಲಗಳಲ್ಲಿ ನಾಲ್ಕು ಸ್ಥಾನಗಳ ಮಾನ ಸಿಕ್ಕೊಡನೆ ಅವರ ಸ್ಥಿತಿ ಸುಧಾರಿಸುವುದೆಂದು ತಿಳಿದರೋ? ಇಂದು ಜಗತ್ತಿನಲ್ಲಿ ಕಾಂಚನವೂ ಕಾರಭಾರವೂ ಅಲ್ಪಸಂಖ್ಯಾಕರ ಕೈಯಲ್ಲಿಯೇ ಇದೆ. ಅವರು ಬಹು ಜನರ ಮೇಲೆ ಅಧಿಕಾರ ನಡೆಸುತ್ತಿಲ್ಲವೋ! ಹಿಂದುಸ್ಥಾನವು ಸ್ವತಂತ್ರವಾದರೆ ಹಿಂದೂಗಳ ಕೈಯಲ್ಲಿ ಅಧಿಕಾರಸೂತ್ರಗಳು ಬರುವುದು ತೀರ ನಿಶ್ಚಿತ. ಆದ್ದರಿಂದ ಶೀಖರಿಗೂ ಮುಸಲ್ಮಾನಬಂಧುಗಳಿಗೂ ನಾನು ಹೇಳುವುದೇನಂದರೆ, ಬಂಧುಗಳೇ, ಬುದಿವಾದವನ್ನು ಬೆಳಿಸಬೇಡಿರಿ; ನಿಮಗೆ ಬೇಕಾದ ಹಕ್ಕುಗಳನ್ನು ಸೆಳೆಯುತ್ತ ಸಂಪಾದಿಸಿಕೊಳ್ಳುತ್ತ ಮುಂದಕ್ಕೆ ಸಾಗಿರಿ."

"ಸರ್ವಪಕ್ಷೀಯ ಸಭೆಯ ವರದಿಯನ್ನು ಬದಿಗಿರಿಸುವ ಸಮಯವೀಗ ಬಂದಿದೆ. ಸ್ವಾತಂತ್ರ್ಯದ ಆದರ್ಶವನ್ನೆತ್ತಿ ಹಿಡಿಯಬೇಕಿನ್ನು. ರಾಷ್ಟ್ರಸಭೆಯ ಅಪ್ಪಣೆಯಂತೆ ಒಂದು ವರ್ಷದವರೆಗೆ ಸ್ವಾತಂತ್ರ್ಯ ಭಾವನೆಗಳಿಗೆ ಬೀಜಹಾಕುವುದಾಯಿತು. ಇನ್ನು ನಿಟ್ಟುಸಿರುಬಿಟ್ಟು ಎದ್ದೇಳಬೇಕು. ಬ್ರಿಟಿಷರು ನಮ್ಮ ಪಡೆಯನ್ನೊಡೆದು ನಮ್ಮನ್ನು ತೊಡೆದುಹಾಕುವುದರಲ್ಲಿ ಶೂರರು. ವೈಸರಾಯರೀಗ ಚಕ್ರಗೋಷ್ಠಿಯ ಪ್ರಸ್ತಾಪವೆತ್ತಿದ್ದಾರೆ. ಈ ಮೋಹಕ್ಕೆ ಮನಸೋಲಬಾರದು. ಅವರ ಬೆರಿಕೆಗತ್ತನ್ನು ಬೆಳೆಸಗೊಡಬಾರದು. ಭಾರತ ಮಂತ್ರಿಗಳಾದ

ಬೇನಸಾಹೇಬರ ಗತ್ತು ನೋಡಿರಿ! ಹಿಂದುಸ್ಥಾನದಲ್ಲಿ ಸಾಮಂತ ಸ್ವರಾಜ್ಯವು ಇದೀಗ ನಡೆಯುತ್ತಿದೆಯಂತೆ! ಲಂಡನದಲ್ಲಿರುವ ಹಾಯರ್ ಕಮಿಶನರರನ್ನು ಹಿಂದೀಯರನ್ನೇ ನೇಮಿಸಿರುವರಂತೆ! ರಾಷ್ಟ್ರಸಂಘಕ್ಕೆ ಹಿಂದೀ ಪ್ರತಿನಿಧಿಗಳನ್ನೇ ಕಳಿಸಿದ್ದಾರಂತೆ! ಸಾಮಾನುಗಳನ್ನು ತೆಗೆದುಕೊಳ್ಳುವ ಅಧಿಕಾರವನ್ನು ಹಿಂದೀಯರ ಕೈಗೇ ಒಪ್ಪಿಸಿದ್ದಾರಂತೆ! ಗವರ್ನರರ ಸ್ಥಳಕ್ಕೆ ಅಲ್ಲಲ್ಲಿ ಹಿಂದೀಯರನ್ನೇ ನೇಮಕ ಮಾಡಿರುವರಂತೆ !! ಈ ಅಂತೆಗಳ ಸಂತೆ ಮುಗಿಯುವಂತಿಲ್ಲ. ಆ ಕಂತೆ ನಮಗೆ ಬೇಡ. ನಾವು ತುಣುಕು ರೊಟ್ಟಿಗಾಗಿ ಚಡಪಡಿಸುತ್ತಿದ್ದಿಲ್ಲ. ಅವರಿಗೆ ಇಲ್ಲಿಂದ ದುಡ್ಡು ದೋಚಿಕೊಂಡು ಹೋಗುವ ಚಟ ಹಿಡಿದಿದೆ. ಹಿಂದುಸ್ಥಾನದ ಹುಲ್ಲುಬನ್ನಿಯಲ್ಲಿ ಪಾಶ್ಚಾತ್ಯ ಗೂಳಿಗಳು ಮೇದು ಕೊಬ್ಬಿದ್ದು ಸಾಕು. ಅದಕ್ಕೆ ತಡೆಗಟ್ಟಬೇಕಾಗಿದೆ. ಕಳೆದ ಹತ್ತು ವರ್ಷಗಳಲ್ಲಿ ಅವರು ಮಾಡಿದ ಕೋಟಿಕಲ್ಯಾಣಗಳ ಗುಣಗಾನ ಮಾಡುತ್ತಾರೆ ! ಆದರೆ ಅವೇ ಹತ್ತು ವರ್ಷಗಳಲ್ಲಿ ನಡೆದ ಪಂಜಾಬದ ಅತ್ಯಾಚರ, ನರನಾರಿಯರ ನರಕಯಾತನೆ, ಸತತ ನಡೆದಿರುವ ದಬ್ಬಾಳಿಕೆಯ ವರ್ಷ ಇವುಗಳ ನೆನಪೇ ಇಲ್ಲ ! ಹಿಡಿತುಂಬ ಹಿಂದೀಯರಿಗೆ ಸಿಕ್ಕುವ ಸ್ಥಾನಮಾನಗಳಿಂದ ನಮಗೆ ಸಮಾಧಾನವಾಗದು."

"ಹೀಗೆ ಮೈಮರೆತು ಕಾರಭಾರ ನಡೆಸುವವರೊಡನೆ ಇನ್ನೆಲ್ಲಿಯ ಸಹಕಾರ? ಕಲ್ಕತ್ತೆಯ ಕೊಂಗ್ರೆಸಿನ ಗೊತ್ತುವಳಿಯಲ್ಲಿ ಗೌರವವಿಡುವುದಾದರೆ ನಮಗೆ ಸ್ವಾತಂತ್ರ್ಯವನ್ನುಳಿದು ಬೇರೆ ಧ್ಯೇಯವೇ ಇಲ್ಲ. ಸ್ವಾತಂತ್ರ್ಯವೆಂದರೆ ಒಬ್ಬಂಟಿಗರಾಗಿ ಎಲ್ಲರ ಸಹಕಾರವನ್ನೂ ತೊರೆದು ದೂರವಿರುವುದೆಂದು ಕೆಲವರು ತಿಳಿಯಬಹುದು.ಹಾಗಲ್ಲ;ನಮಗೆ ಕೋಟಿಗಟ್ಟಲೆ ಜನರ ಹಕ್ಕನ್ನು ಮೆಟ್ಟಿನಿಂತ ಈ ಬ್ರಿಟಿಷ ಸಾಮ್ರಾಜ್ಯದ ಸಂಪರ್ಕ ಮಾತ್ರ ಬೇಡ. ಭಾರತವು ಸ್ವತಂತ್ರವಾದರೆ ಜಗತ್ತಿನ ಸಮಸ್ಯೆಗಳನ್ನು ಬಿಡಿಸುವುದರಲ್ಲಿ ತನ್ನ ತ್ಯಾಗವೀರತೆಯನ್ನು ತೋರಿಸದಿರದು. ಆದರೆ ಈ ಬ್ರಿಟಿಷ ಸಾಮ್ರಾಜ್ಯಕ್ಕೋಸ್ಕರ ತಾವು ಏನನ್ನೂ ಕೊಡಲಾಗದು. ಸ್ವತಂತ್ರ ಭಾರತವು ಸರ್ವರಾಷ್ಟ್ರಗಳ ಸ್ನೇಹಸಂವರ್ಧನಕ್ಕಾಗಿ ಶ್ರಮವಹಿಸಲಿಕ್ಕೆ ಹಿಂದುಮುಂದೆ ನೋಡದು."

"ಧ್ಯೇಯದ ಶಬ್ದಯೋಜನೆಯಲ್ಲಿ ನಮಗೆ ಜಗಳಬೇಡ. ನಮಗೆ ಬೇಕಾದುದು ದಂಡು ಮತ್ತು ಕೋಶಗಳ ಮೇಲಿನ ಅಧಿಕಾರ. ಬ್ರಿಟಿಷ ಪಾರ್ಲಿಮೆಂಟ

ನವರು ನಮಗೆ ಕೆಲವು ಅಧಿಕಾರಗಳನ್ನು ಕೊಡಬೇಕೆಂದು ನಾವು ಬಿಕ್ಕೆಬೇಡುವು ದಿಲ್ಲ. ಜಗಕ್ಕೆಲ್ಲ ಗಂಭೀರವಾಗಿ ಘಂಟಾಘೋಷವಾಗಿ ಹೇಳುತ್ತಿದ್ದೇವೆ. ನಮಗೆ ಸ್ವಾತಂತ್ರ್ಯ ಸಂಪಾದಿಸುವುದಿದೆಯೆಂದು. ಇಂದಾಗಲಿ ಮುಂದಾಗಲಿ ನಮ್ಮ ಆದ ರ್ಶವು ಕೈಗೂಡಲೇಬೇಕು. ನಮ್ಮೆದುರು ಮೂರು ಮಹತ್ವದ ಮಾತುಗಳಿವೆ. ಒಂದನೆಯದೆಂದರೆ ಅಲ್ಪಸಂಖ್ಯಾಕರ ಸಮಸ್ಯೆ. ಈ ಬಗ್ಗೆ ನಾನು ಮುಂಚೆಯೇ ಹೇಳಿದ್ದೇನೆ. ಅವರ ಮನಸ್ಸಿಗೆ ದಿಟವಾಗುವಂತೆ ನಮ್ಮ ಆಚರಣೆಯಿಂದ ನಾವು ಅವರ ಸಂಸ್ಕೃತಿ ಸಂರಕ್ಷಣೆಯನ್ನು ಮಾಡುತ್ತೇವೆಂದು ತೋರಿಸಬೇಕು. ಕೊಡ ಗೈಯಿಂದ ಅವರನ್ನು ಮುಂದೆ ಕರೆಯಬೇಕು."

"ಎರಡನೆಯ ಮಾತು ಸಂಸ್ಥಾನಗಳ ಬಗ್ಗೆ. ಸಂಸ್ಥಾನದ ರಾಜರು ತಾವು ವಿಷ್ಣುವಿನ ಅಂಶಕರೆಂದೂ ಸಂಸ್ಥಾನವು ತಮ್ಮ ಜನ್ಮಸಿದ್ಧ ಹಕ್ಕೆಂದೂ ಸಾರುತ್ತಿರು ವರು. ಪ್ರಜೆಗಳ ಕೇಡುಪಾಡುಗಳನ್ನು ಕಾಲ್ಕೆಳಗೆ ತುಳಿದು ಭೋಗದ ಬಂಟ ರಾಗಿ ನಮ್ಮ ಸರಕಾರದ ನೆಂಟರಾಗಿ ಮೆರೆಯುತ್ತಿದ್ದಾರೆ. ಒಬ್ಬ ಸಂಸ್ಥಾನಿಕ ನಂತೂ ಕಾಂಗ್ರೆಸ್ ಮತ್ತು ಇಂಗ್ಲಂಡಕ್ಕೆ ಕೈಗೆ ಕೈಹತ್ತಿದರೆ ತಾನು ಬ್ರಿಟಿಷರ ಕಡೆಯಿಂದ ತಾಯ್ನಾಡಿನೊಡನೆ ಯುದ್ಧಮಾಡುವೆನೆಂದು ಹೇಳಿದನು. ಇದೇ ಅವರ ದೇಶಾಭಿಮಾನ. ಸಂಸ್ಥಾನದ ಪ್ರಜೆಗಳಿಗೂ ರಾಜರಿಗೂ ತಮ್ಮ ಭವಿ ತವ್ಯತೆಯನ್ನು ನಿರ್ಣಯಿಸುವ ಹಕ್ಕಿದೆ. ರಾಜರಿಗೆ ಮೂಲೆಗಿರಿಸಿ ಲೋಕಸತ್ತಾ ತ್ಮಕ ರಾಜ್ಯಪದ್ಧತಿಯನ್ನು ಪ್ರಾರಂಭಿಸುವ ಅಧಿಕಾರವು ನಮಗಿದ್ದಂತೆ ಅಲ್ಲಿಯ ಪ್ರಜೆಗಳಿಗೂ ಇರಲೇ ಬೇಕು. ಕೊಂಗ್ರೆಸ್ ಅದನ್ನು ಕಿತ್ತುಹಾಕಲಾರದು."

"ಮೂರನೆಯ ಮಾತು ಒಕ್ಕಲಿಗರ ಮತ್ತು ಕೂಲಿಕಾರರದು. ಇವರೇ ಭಾರ ತದ ಮುಖ್ಯಾಂಗರು. ಅವರ ನೆರವು ಸಿಕ್ಕಷ್ಟು ನಮಗೊಳಿತು. ಆದ್ದರಿಂದ ಅವರ ಹಿತಾಹಿತಗಳೊಡನೆ ನಮ್ಮ ಸಂಬಂಧಗಳನ್ನು ನಾವು ಅಂಟಿಸಲೇಬೇಕು. ಕೂಲಿಕಾರರಿಗೆ ಹೊಟ್ಟೆಬಟ್ಟೆಗಳಿಗೆ ಸಾಕಷ್ಟು ನೀಡದ ಉದ್ಯಮಗಳನ್ನು ಉಚ್ಚಾ ಟಿಸಬೇಕು. ಒಕ್ಕಲಿಗನ ಕಲ್ಯಾಣ ನೋಡದ ಆಸ್ತಿವಂತರ ಸೊಕ್ಕನ್ನು ಅಡಗಿ ಸಲೇ ಬೇಕು."

"ಇವನ್ನೆಲ್ಲ ಮಾಡುವಾಗ ನಮ್ಮ ಕಾರ್ಯಕ್ರಮದ ಬಗೆಯನ್ನು ಮರೆಯಲಾ ಗದು. ನ್ಯಾಯವಾದ ಮತ್ತು ಶಾಂತರೀತಿಯಿಂದಲೇ ಕೆಲಸ ಮಾಡಬೇಕು. ಮೊದಲಿ

ನಂತೆ ಶಾಲೆ-ಕಾಲೇಜು-ಕೋರ್ಟುಗಳ ಬಹಿಷ್ಕಾರವು ದೇಶದಲ್ಲಿ ಚಳವಳಿಯು ಕಾವೇರಿದಾಗ ನಡೆವೇ ಬಿಡುವುದು. ಕೌನ್ಸಿಲ್ ಬಹಿಷ್ಕಾರ ಮಾಡಿ ಈಸಲ ಕೆಲ ವೆಡೆಯಲ್ಲಿ ಕರನಿರಾಕರಣವನ್ನು ಕೈಕೊಳ್ಳಲೇಬೇಕು. ಕೂಲಿಕಾರರ ಸಂಘಗಳ ನ್ನೇರ್ಪಡಿಸಿ ವರ್ತಕರನ್ನು ಸಜ್ಜುಗೊಳಿಸಿ ಸ್ವಾತಂತ್ರ್ಯಸಂಗ್ರಾಮವನ್ನು ಒತ್ತರ ದಿಂದ ಸಾಗಿಸಬೇಕು. ಈ ಬಗ್ಗೆ ಸರ್ವಾಧಿಕಾರವನ್ನು ಅಖಿಲ ಭಾರತೀಯ ಕೊಂಗ್ರೆಸ್ ಕಮಿಟಿಗೆ ಕೊಡಬೇಕು. ವಿದೇಶವಸ್ತ್ರ ಮತ್ತು ಬ್ರಿಟಿಷ ವಸ್ತುಗಳ ಮೇಲಿನ ಬಹಿಷ್ಕಾರವನ್ನು ಭಯಂಕರವಾಗಿ ಬೆಳೆಸಬೇಕು. ಭಾರತದ ಬೇಡಿಗ ಳನ್ನು ಬಿಗಿಯುವುದಕ್ಕಾಗಿ ಬೆಳೆಸಿದ ಸಾಲಗಳನ್ನು ಕೊಂಗ್ರೆಸಿನವರು ಮಾನ್ಯ ಮಾಡಲಾಗದು. ಗುಪ್ತಮಂಡಳಗಳನ್ನು ಹೂಡಿ ಸರಕಾರದ ಮೇಲಧಿಕಾರಿಗಳು ಮತ್ತು ನಮ್ಮೊಳಗಿನ ಮದಾಂಧರನ್ನು ಕೋವಿ-ಖಡ್ಗ-ಗುಂಡು-ವಂಡುಗಳಿಂದ ಹಣಿ ಯುವ ಹಂಚಿಕೆಗಳನ್ನು ಮಾಡುತ್ತಿರುವವರ ಮೇಲಿನ ಖಟ್ಲೆಗಳು ಬೆಳೆಯುತ್ತಿವೆ. ಅವರಿಗೆಲ್ಲ ಇಂದು ಸಾರಿ ಹೇಳುವೆನು. ಬಂಧುಗಳೇ, ಗುಪ್ತಸಂಘಗಳನ್ನು ಸ್ಥಾಪಿಸಿ ಹೋರಾಡುವ ಕಾಲವು ಕಳೆದು ಹೋಯಿತು. ಇನ್ನು ಬೇಕಾದುದು ಬಹಿರಂಗದ ಬೆದರಿಕೆ. ಮರೆಯಲ್ಲಿ, ತೆರೆಯಲ್ಲಿ ಮಾಡಿದ್ದು ಸಾಕು. ಹೊರಗೆ ಸೂರ್ಯಪ್ರಕಾಶದಲ್ಲಿ ಮನೆಯ ಮಹಡಿಯ ಮೇಲೆ ನಿಂತು ಸಾರುವಾ. ಭಾರ ತದ ಸ್ವತಂತ್ರವು ನಮ್ಮ ಜನ್ಮಸಿದ್ಧ ಹಕ್ಕು. ಅದನ್ನು ಗಳಿಸಲು ಮುಚ್ಚು ಮರೆಯೇಕೆ ! ಸೆರೆಮನೆ, ದಂಡಧರರ ಡೊಣ್ಣೆ ಏಟು ಅರೆಹೊಟ್ಟೆಯೂಟ, ಕೊನೆಗೆ ಮರಣ ಇವೆಲ್ಲವೂ ನಮಗೆ ಸಿಕ್ಕಾವು ? ಆದರೆ ಹಿಡಿದ ಹಾದಿಯಿಂದ ಒಂದಂಗುಲ ವಾದರೂ ಅತ್ತಿತ್ತ ಚಲಿಸದೆ ಮುಂದೆ ಸಾಗಬೇಕು. ಶಾಂತತೆಯನ್ನು ಮಾತ್ರ ಬಿಡಲಾಗದು. ಅಂದರೆ ಈ ಪುರಾತನವಾದ ಆದರೆ ಸನಾತನವಾದ ತರುಣ ಭಾರತದ ಬಂಧನದ ಬೇಡಿಗಳನ್ನು ಕಡಿದೊಗೆದ ಸಮಾಧಾನವಾದರೂ ಸದಾ ನಮಗೆ ದೊರಕೀತು "! ಎಂದು ಸಾರಿದರು. ಅವರು ಕೊಂಗ್ರೆಸದ ಅಧ್ಯಕ್ಷರಾಗಿ ಮಾಡಿದ ಕೆಲಸವನ್ನು ಕುರಿತು ಮಹಾತ್ಮರು ಹೀಗೆಂದು ಅಭಿಪ್ರಾಯ ಪಟ್ಟಿರುವರು:—

"ಇವರನ್ನು ಅಧ್ಯಕ್ಷರನ್ನಾಗಿ ಆರಿಸಿದ್ದು ಯಥಾಯೋಗ್ಯವಾಯಿತು. ಜಾಬಾಳ ಮಾತುಗಳನ್ನಾಡದೆ ಅವರು ಸೂತ್ರದಲ್ಲಿಯೇ ತಮ್ಮ ಭಾಷಣವನ್ನು ಮುಗಿಸಿದರು. ಆದರೆ ಅದು ಸರ್ವ ವಿಷಯಗಳಿಂದ ಕೂಡಿತ್ತು. ರಭಸದ ಆವೇಶಪೂರ್ಣ ವಿಚಾರಗಳನ್ನು ಅವರು ಸೌಮ್ಯರೀತಿಯಿಂದ ನಾಡಿನ ಮುಂದಾಳುಗಳೆದುರಿಗಿಟ್ಟರು.

ಪಕ್ಷಪಾತವಿಲ್ಲದೆ ಮಾತನಾಡುವ ಅವರ ಜಾಣ್ಮೆಯು ಹೊಗಳತಕ್ಕದು. ಸಂಪೂರ್ಣ ಸಮಾಜ ಸತ್ತಾವಾದಿಗಳಾದ್ದರಿಂದ ದೇಶಕ್ಕೆ ನೆಮ್ಮದಿಯಾಗಿ ನಡೆಸಿ ಕೊಂಡು ಹೋಗುವ ರಾಜ್ಯವ್ಯವಸ್ಥೆಯನ್ನೇ ನಿರ್ಣಯಿಸಬಹುದೆಂದು ತೋರು ತ್ತದೆ. ಧ್ಯೇಯಕ್ಕೋಸ್ಕರ ದೇಹದಂಡನೆಯನ್ನು ಮಾತ್ರ ಎಲ್ಲರಿಗಿಂತ ಮುಂಚೆ ಅವರು ಮಾಡುವವರು. ನುಡಿಯಂತೆಯೇ ಕೊಂಗ್ರೆಸಿನಲ್ಲಿ ಅವರ ನಡೆಯಿತ್ತು. ಸರ್ವರ ಹಿತಾಹಿತಸುಖಸೌಲತ್ತುಗಳನ್ನು ಕಂಡು, ಒಂದು ಹಿಡಿತದಿಂದ ಕೆಲಸ ಮಾಡಿದರು. ಅವಿಶ್ರಾಂತ ಪರಿಶ್ರಮ ಮಾಡಿದರು. ಅದ್ದರಿಂದ ಅವರ ಸಾದಾ ವರ್ತನ-ನಿಗರ್ವಭಾವಗಳನ್ನು ಕಂಡು, ಪ್ರೇಮಪೂರ್ಣ ಮಾತುಗಳನ್ನು ಕೇಳಿ ಎಲ್ಲರ ಮನದ ಮೇಲೂ ಒಳ್ಳೇ ಪರಿಣಾಮವಾಯಿತು. ಸುಖಸುಪ್ಪತ್ತಿಗೆಯಲ್ಲಿ ಹೊರಳಾಡಿ ವಿಶ್ರಾಂತಿ ಸಮಯದಲ್ಲಿ ಸೊಗಸಿಗೆಂದು ನಾಲ್ಕು ಮಾತುಗಳನ್ನು ಹರಟುವ ಸಮಯವು ಸಂದು ಹೋಯಿತು. ಸುಖಸ್ವಾರ್ಥಗಳನ್ನು ಸುಟ್ಟು ಶರೀರ ಸವೆಸುವ ಪ್ರಸಂಗವು ಬಂದಿದೆಯೆಂಬುದನ್ನು ಅವರ ಮಾತುಗಳು ಸ್ಪಷ್ಟ ಮಾಡಿದವು."

ಇಂಥ ತೇಜಃಪುಂಜ ತರುಣ ನಾಯಕನಲ್ಲಿ ನಂಬಿಗೆಯನ್ನು ನೆಲೆಸುವುದು ತಪ್ಪೇ ?

---

## ದೇಸ್ವಾತಂತ್ರ್ಯದ ಪ್ರಕಟನೆ

( ಇದನ್ನು ಪ. ಜವಾಹರಲಾಲರು ೨೬ ನೇ ಜನೇವರಿ ೧೯೩೦ ರಲ್ಲಿ ರಾಷ್ಟ್ರಪತಿಯ ಸ್ಥಾನದಿಂದ ಪ್ರಕಟಿಸಿದರು. )

ಹಿಂದುಗಳ ಸಂಪೂರ್ಣವಾದ ಬೆಳೆವಣಿಗೆಗೆ ಸಹಾಯವಾಗಲು ಬೇಕಾ ದರೆ ಅಗತ್ಯವಾದ ಜೀವಿತಸೌಕರ್ಯಗಳು ಅವರಿಗಿರುವುದು ಅವಶ್ಯ; ತಮ್ಮ ಕಾಯಕಷ್ಟದ ಫಲವನ್ನು ಅನುಭವಿಸಲಿಕ್ಕೆ ಅವರಿಗೆ ಯಾವ ತಡೆಯೂ ಇರ ಬಾರದು; ಬೇರೆ ದೇಶದವರಿಗಿದ್ದಂತೆ ಅವರಿಗೂ ಸ್ವಾತಂತ್ರ್ಯವು ಇದ್ದೇ ತೀರಬೇಕು; ಇವೆಲ್ಲವೂ ಅವರ ಜನ್ಮಸಿದ್ಧವಾದ ಅಧಿಕಾರಗಳೇ ಸರಿಯೆಂದು ನಮ್ಮ ಬಲವಾದ ಭರವಶೆಯು. ಇಂತಹ ಅಧಿಕಾರಗಳನ್ನು ಜನರಿಂದ ಕಿತ್ತುಕೊಂಡು ಅವರನ್ನು ದಬ್ಬಾಳಿಕೆಯಿಂದ ಹತ್ತಿಕ್ಕುವಂತಹ ಯಾವ ಸರಕಾರವನ್ನಾದರೂ ಹೊಡೆದುಹಾಕ

ಲಿಕ್ಕೂ ಅಥವಾ ಅವರ ಬದಲು ಬೇರೊಂದನ್ನು ತಂದಿರಿಸಲಿಕ್ಕೂ ಅವರಿಗೆ ಅಧಿಕಾರವಿದೆಯೆಂದೇ ನಾವು ನಂಬುತ್ತೇವೆ. ಆಂಗ್ಲ ಸರಕಾರವು ಹಿಂದುಗಳ ಸ್ವಾತಂತ್ರ್ಯವನ್ನು ಕಸಿದುಕೊಂಡಿದ್ದಲ್ಲದೆ ಎಲ್ಲೆಲ್ಲಿಯೂ ಸುಲಿಗೆಯು ಸೂರೆಯನ್ನೇ ಮಾಡುತ್ತ ಅವರಲ್ಲಿಯ ಆರ್ಥಿಕ-ರಾಜಕೀಯ-ಸಾಂಸ್ಕೃತಿಕ-ಅಧ್ಯಾತ್ಮಿಕ ಹುರುಗನ್ನು ಮುರಿಮಾಡುವುದನ್ನೇ ತನ್ನ ಗುರಿಯಾಗಿಟ್ಟುಕೊಂಡಿದೆ. ಆದ್ದರಿಂದಲೇ ಹಿಂದುಗಳು ಆಂಗ್ಲರ ಸಂಗವನ್ನೇ ತೊರೆದು ಪೂರ್ಣ ಸ್ವರಾಜ್ಯವನ್ನು ಅಥವಾ ಪೂರ್ಣ ಸ್ವಾತಂತ್ರ್ಯವನ್ನು ಪಡೆಯಬೇಕೆಂಬುದರಲ್ಲಿ ನಮ್ಮೆಲ್ಲರ ಭರವಸೆಯಿದೆ.

ಹಿಂದುಗಳ **ಆರ್ಥಿಕ** ಹಾನಿಯು ಎಂತಾಗಿದೆಯೆಂದರೆ:- ಜನರ ಆದಾಯ, ಸರಕಾರದ ಕಂದಾಯ, ಇವೆರಡೂ ಸರಿಯಾದ ಪ್ರಮಾಣದಲ್ಲಿಲ್ಲ. ನಮ್ಮ ಸರಾಸರಿ ಆದಾಯವು ದಿನವೊಂದಕ್ಕೆ ಏಳು ಬಿಲ್ಲೆಗಳು. ಸರಕಾರದ ಭಾರವಾದ ಕರದಲ್ಲಿ ೧೦೦ಕ್ಕೆ ೨೦ರಂತೆ ಭೂಕಂದಾಯವೂ ೩ರಂತೆ ಉಪ್ಪಿನಕರವೂ ಇದ್ದು ಇದರಿಂದ ಈ ಕರಭಾರದಿಂದ ಬಡವರು ಬಲು ಬಳಲುತ್ತಿದ್ದಾರೆ.

ನೂಲುವುದು ಮುಂತಾದ ಹಳ್ಳಿಯ ಕೈಗಾರಿಕೆಗಳು ಹೇಳಲು ಹೆಸರಿಲ್ಲದಂತೆ ಹೊಡೆದು ಹಾಕಲ್ಪಟ್ಟಿವೆ. ಇದರಿಂದ ಪಾಪ, ಬಡ ಒಕ್ಕಲಿಗರು ವರ್ಷದಲ್ಲಿ ೪ ತಿಂಗಳು ನಿರುದ್ಯೋಗಿಗಳಾಗುವಂತಾಗಿದೆ. ಬೇರೆ ದೇಶಗಳಲ್ಲಿದ್ದಂತೆ, ಈ ಹಾಳು ಮಾಡಿದ ಕೈಗಾರಿಕೆಗಳ ಬದಲು, ಬೇರೆ ಯಾವವನ್ನೂ ಆ ಬಡವರಿಗೆ ಕೊಡಲಾಗಿಲ್ಲ.

ಸುಂಕ-ನೋಟುಗಳ ವಿಷಯದಲ್ಲಂತೂ ಮುನ್ನಿಂದಂತೆ ಪುಂಡಾಟವು ನಡೆದಿದೆ. ಇದರಿಂದಲೂ ಒಕ್ಕಲಿಗರಿಗೆ ಗಾಯದಲ್ಲಿ ಕಾರವಿಕ್ಕಿದಂತಾಗಿ ಬಿಟ್ಟಿದೆ. ಬ್ರಿಟಿಶ ವಸ್ತುಗಳೇ ನಮ್ಮಲ್ಲಿಗೆ ಹೆಚ್ಚಾಗಿ ಬರುತ್ತವೆ. ಅಲ್ಲದೆ ಅವುಗಳ ಮೇಲೆ ಹಾಕಿದ ಸುಂಕವೂ ಕಡಿಮೆ. ಬೇರೆ ಸರಕುಗಳ ಮೇಲೆಯೇ ಅದರ ಏರಾಟ. ಹೀಗೆ ಸಿಕ್ಕುವ ಸುಂಕವು ಜನತೆಯ ಕಷ್ಟನಿವಾರಣೆಗಾಗಿ ಬಳಸಲ್ಪಡುವುದೆನ್ನಬೇಕೇ ? ಇಲ್ಲ; ದುಂದುಗಾರಿಕೆಯ ಆಡಳಿತವನ್ನು ಭದ್ರಗೊಳಿಸಲೆಂದೇ ಅದರ ವೆಚ್ಚವು. ಪರಕೀಯ ನಾಣ್ಯ ಬದಲಾವಣೆಯ ದರದ ವಿಷಯದಲ್ಲೂ ಸ್ವೈರವೃತ್ತಿಯೇ ಕಂಡುಬರುತ್ತಿದೆ. ಇದರಿಂದ ಲಕ್ಷಾವಧಿ ಜನರು ಹಾಳಾಗಿ ಹೋಗುವಂತಾಗಿದೆ.

**ರಾಜಕೀಯ** ವಿಷಯದಲ್ಲಂತೂ ಬೇರೆ ಆರ ಆಳಿಕೆಯಲ್ಲಿಯೂ ಹಿಂದು ಸ್ಥಾನವು ಇಷ್ಟು ಕಂಗಾಲಾಗಿದ್ದಿಲ್ಲ. ಸುಧಾರಣೆಗಳ ಸೋಗು ಮಾತ್ರ ಹಿಂದು ಸ್ಥಾನದಲ್ಲಿ ಬಂದಿದೆ. ಆದರೆ ಅದರಿಂದ ನಿಜವಾದ ರಾಜಕೀಯ ಅಧಿಕಾರಗಳು ಹಿಂದುಗಳಿಗೆ ಸಿಕ್ಕೇ ಇಲ್ಲ. ಈಗ ದೊಡ್ಡವರೆಂದೆನಿಸಿಕೊಳ್ಳುವ ಹಿಂದೀಯ ಅಧಿಕಾರಿಗಳೂ ಪರಕೀಯ ಸತ್ತೆಯ ಎದುರು ಬಗ್ಗಿರಬೇಕಾಗುತ್ತದೆ. ಮನವನ್ನು ಬಿಚ್ಚಿ ಮಾತನಾಡಲಿಕ್ಕೂ ಪರರೊಡನೆ ಸ್ವೇಚ್ಛೆಯಿಂದ ಬೆರೆದು ನಡೆಯಲಿಕ್ಕೂ ನಮ್ಮವರಿಗೆ ಅಧಿಕಾರವಿಲ್ಲ. ಇದಕ್ಕಾಗಿ ಪರದೇಶಗಳಲ್ಲಿಯ ನಮ್ಮ ಹಿಂದ ಬಾಂಧವರು ಬಾಯಿಮುಚ್ಚಿಕೊಂಡು ಅಡವಿಪಾಲಾಗಿ ತಿರುಗಿ ನಮ್ಮ ದೇಶಕ್ಕೂ ಬರದಂತಾಗಿಬಿಟ್ಟಿದೆ. ನಮ್ಮಲ್ಲಿಯ ರಾಜಕಾರಣಪಟುತ್ವವನ್ನು ಮಣ್ಣುಮುಕ್ಕಿಸಿ ಗೌಡಕಿ, ಕುಲಕರ್ಣಿಕಿ, ಕಾರಕೂನಿಯ ಸ್ಥಳಗಳಿಂದಲೇ ಸೌಭಾಗ್ಯವಂತರೆಂ ದೆಂದುಕೊಳ್ಳುವಂತಹ ಕಾಲವನ್ನು ಸರಕಾರವು ನಮಗೆ ತಂದುಬಿಟ್ಟಿದೆ.

**ಸಂಸ್ಕೃತಿಯ** ವಿಷಯವೆಂದರೆ:— ಈಗಿನ ಶಿಕ್ಷಣಪದ್ಧತಿಯಿಂದ ನಮ್ಮ ಸಾಂಸ್ಕೃತಿಕ ತಳಹದಿಯೇ ಸಡಿಲಾಗಿಹೋಗಿದೆ. ಮತ್ತು ಆ ಪದ್ಧತಿಯಿಂದ ಶಿಕ್ಷಣವನ್ನು ಪಡೆದು ನಾವು ಹೇಸಿಗೆಯೊಳಗಿನ ಹುಳದಂತೆ ಪಾರತಂತ್ರ್ಯವನ್ನೇ ತಬ್ಬಿಕೊಳ್ಳುತ್ತೇವೆ.

**ಅಧ್ಯಾತ್ಮಿಕ** ನಾಶವೆಂದರೆ:— ನಮ್ಮ ಕೈದುಗಳನ್ನು ಕಾಯಿದೆಯಿಂದ ಕಸಿದುಕೊಂಡು ನಮ್ಮನ್ನು ಸರಕಾರವು ನಪುಂಸಕರನ್ನಾಗಿ ಮಾಡಿದೆ. ಬ್ರಿಟಿಶ ಸೈನ್ಯವನ್ನು ನಮ್ಮಲ್ಲಿಟ್ಟು ನಮ್ಮಲ್ಲಿಯ ಪ್ರತಿಕಾರ ಶಕ್ತಿಯ ತಲೆಯನ್ನೇ ಅವರು ಕುಕ್ಕಿಬಿಟ್ಟಿದ್ದಾರೆ. ಇದರಿಂದ ನಮ್ಮ ಹಿತವನ್ನು ನಾವು ಸಾಧಿಸಿಕೊಳ್ಳದವ ರಾಗಿದ್ದೇವೆ. ಪರಕೀಯರ ಪಿರಾಟಕ್ಕೆ ಉತ್ತರ ಕೊಡಲು ನಮ್ಮಲ್ಲಿ ಶಕ್ತಿಯಿಲ್ಲ; ಹೆಚ್ಚೇನು ಕಳ್ಳಕಾಕ ಕೊಲೆಗಾರರಿಂದ ನಮ್ಮನ್ನು ರಕ್ಷಿಸಿಕೊಳ್ಳುವ ಶಕ್ತಿಯೂ ನಮ್ಮಲ್ಲಿಂದ ಹೊರಟುಹೋಗಿದೆ.

ಹೀಗೆ ನಾಲ್ಕು ಬಗೆಯಿಂದಲೂ ನಮ್ಮನ್ನು ಎಡರಿಗೆ ಸಿಲ್ಕಿಸಿದ ಅರಸಾಳಿಕೆಗೆ ಹೆಚ್ಚು ದಿನ ಇನ್ನು ಒಳಗಾಗಿರುವುದು ಮನುಷ್ಯತ್ವವನ್ನು ತೋರಿಸುವುದಿಲ್ಲ. ಹೀಗಿರುವುದನ್ನು ನೋಡಿ ದೇವರು ಕೂಡ ನಮ್ಮ ಮೇಲೆ ಕೋಪಗೊಳ್ಳುವನು. ಆದರೂ ಸ್ವಾತಂತ್ರ್ಯವನ್ನು ಪಡೆಯಲಿಕ್ಕಾಗಿ ಹಿಂಸಾಮಾರ್ಗವನ್ನು ಕೈಕೊಳ್ಳು

ವುದು ನಮಗೆ ಬೇಡ. ಸಾಧ್ಯವಿದ್ದ ಮಟ್ಟಿಗೆ ನಾವೇ ಆಳರಸರಿಗೆ ಸಹಕಾರಿಗಳಾಗದೆ ಹಿಡಿದಿರುವುದಕ್ಕೂ ಸತ್ಯಾಗ್ರಹ–ಕರನಿರಾಕರಣೆಗಳಿಗಾಗಿಯೂ ನಾವು ಹೆಣಗುತ್ತೇವೆ. ಸಿಟ್ಟಿಗೆಬ್ಬಿಸಿದರೂ ಶಾಂತರಾಗಿದ್ದು ಅಸಹಕಾರ– ಕರನಿರಾಕರಣೆಗಳನ್ನು ಆಚರಿಸುತ್ತಿದ್ದಲ್ಲಿ ಈ ಅಮಾನುಷವಾದ ಅರಸಾಳಿಕೆಯ ಅಬ್ಬರವು ಅಡಗುವುದೆಂದು ನಮಗೆ ನಂಬಿಕೆಯಾಗಿದೆ. ಆದ್ದರಿಂದ ಪೂರ್ಣಸ್ವರಾಜ್ಯವನ್ನೇ ಗಳಿಸಲೆಂದು ಕೊಂಗ್ರೆಸದವರು ವೇಳೆವೇಳೆಗೆ ಮಂಡಿಸುವ ಸೂಚನೆಗಳನ್ನು ಆದರದಿಂದ ಸ್ವೀಕರಿಸುತ್ತೇವೆಂದು ನಾವು ಈ ದಿನ ಪ್ರಮಾಣವನ್ನು ಮಾಡಿ ಸಾರಿ ಹೇಳುತ್ತೇವೆ.

---

## ವಾಹರಲಾಲರ ಸ್ವಭಾವ

ಅಷ್ಟೈಶ್ವರ್ಯದ ಕುಬೇರನಾಗಿ ಪ್ರಯಾಗದ ಪ್ರಭುವಾಗಿದ್ದ ಮೋತಿಲಾಲರ ಪ್ರಾಣಪ್ರಿಯನಾದ ಒಬ್ಬನೇ ಒಬ್ಬ ಮಗ. ಸುಖಸಮೃದ್ಧಿಯ ಭೋಗಗಳು ಬಾಯಿಂದು ಕೈಯೆತ್ತಿ ಕರೆಯುತ್ತಿದ್ದವು. ಹಂಸತೂಲಿಕಾತಲ್ಪದಲ್ಲಿ ಹೊರಳಾಡುವ ಯೋಗ. ಆನಂದಭವನದಂಥ ಇಂದ್ರನ ವಿಲಾಸಯೋಗ್ಯವಾದ ಮನೆ. ಜವಾಹರಲಾಲರು ಇವೆಲ್ಲವನ್ನೂ ಕಾಲುಕಸಮಾಡಿ ದೇಶದ ಬಾಳ್ವೆಯನ್ನು ಹಸಮಾಡಬೇಕೆಂದು ಹೊರಟರು. ಹಗಲಿರುಳು, ಚಳಿಮಳೆಗಾಳಿ, ಹಸಿವೆನೀರಡಿಕೆಗಳ ಹಂಗುದೊರೆದು ರಾಜಕೀಯ ರಣಾಂಗಣದಲ್ಲಿ ಇಂಥವರು ಧುಮುಕುವುದೆಂದರೆ ಅದೊಂದು ಭಾಗ್ಯವಲ್ಲವೇ ? ಇವರಲ್ಲಿ ಅನೇಕ ಗೌರವ ಯೋಗ್ಯವಾದ ಗುಣಗಳಿವೆ. ಅವುಗಳಲ್ಲಿ ಕೆಲವನ್ನು ಓದುಗರಿಗಾಗಿ ಇಲ್ಲಿ ಉದಾಹರಿಸುವೆನು.

ಅತ್ಯಂತ ಸಾದಾವರ್ತನವೇ ಅವರ ಮೊದಲ ಗುಣ. ಸುಲಭ ಜೀವನ ಮತ್ತು ಉಚ್ಚ ವಿಚಾರಗಳನ್ನು ಅವರು ಮೇಳವಿಸಿರುವರು. ಯಾವಾಗ ಯಾರು ಮಾತನಾಡಿದರೂ ಸರಳವಾಗಿಯೂ ಸೌಜನ್ಯವಾಗಿಯೂ ನುಡಿಯುವರು. ವೇಷದಲ್ಲಿ ವಿಜೃಂಭಣೆಯಿಲ್ಲ. ನಿರ್ಮಲವಾದ ಶುದ್ಧ ಸಾದಾ ಖಾದಿಯನ್ನೇ ಧರಿಸುವರು. ಅವರು ದೊಡ್ಡಸ್ಥಿಕೆಯ ದರ್ಪವನ್ನು ನಡೆಸಿವುದಿಲ್ಲೆಂಬುವದಕ್ಕೆ ಅಯೋಧ್ಯಾಪ್ರಾಂತದ ಒಕ್ಕಲಿಗರಲ್ಲಿ ಚಳವಳನ್ನು ಮಾಡುತ್ತಿದ್ದಾಗ ೧೦–೧೫ ಮೈಲಾದರೂ ಲೆಕ್ಕಿಸದೆ ಕಾಲುನಡೆಯಿಂದಲೇ ಹೋಗುತ್ತಿದ್ದುದು ಸಾಕ್ಷಿ. ಪುರಾಣಿ ತಿಂದು ನೀರು

ಕುಡಿದು ಬಡವರೊಡನೆ ಬಡವರಾಗಿ ಕಾಲ ಕಳೆದು ಅವರಿಗೆ ಗೊತ್ತು. ಕಾಶಿ ಯೊಳಗೆ ಗಾಂಧಿ ಆಶ್ರಮದಲ್ಲಿದ್ದಾಗ್ಗೆ ವಿದ್ಯಾರ್ಥಿಗಳೊಡನೆ ಬೆಲ್ಲಪುಠಾಣಿಗಳನ್ನು ತಿಂದು ಕರಡು ಚಾಪೆಯ ಮೇಲೆ ನಿದ್ದೆ ಹೋಗುತ್ತಿದ್ದರು. ಸಾಯಮನ್ ಕಮಿಶನ್ ಬಹಿಷ್ಕಾರದ ಬಳಿಕ ಲಖನೌದಲ್ಲಿ ಒಮ್ಮೆ ಡಾ. ಆನಿಬೆಜಂಟಮ್ಮನವರು ಉಪನ್ಯಾಸ ಕೊಡುತ್ತಿರುವಾಗ ಜವಾಹರಲಾಲರು ಸಾಮಾನ್ಯ ನಾಗರಿಕರಂತೆ ಗೆಳೆಯರ ಗುಂಪಿನಲ್ಲಿ ನೆಲದ ಮೇಲೆ ಕೂತಿದ್ದನ್ನು ಕಂಡು ಅವರನ್ನು ತಮ್ಮ ಬಳಿ ವ್ಯಾಸ ಪೀಠದ ಮೇಲೆ ಕೂಡಲು ಕರೆದರು. ಅವರು ಗೆಳೆಯರನ್ನು ಬಿಟ್ಟು ಮುಂದೆ ಹೋಗಲು ಸಮ್ಮತಿಸಲಿಲ್ಲ. ಕಳೆದ ಲಾಹೋರ ಕೊಂಗ್ರೆಸಿನಲ್ಲಿ ಬಹುಕಾಲ ಕೆಲಸದಲ್ಲಿ ತೊಡಗಿ ಕೂಡುವ ಪ್ರಸಂಗ ಬಂದದ್ದರಿಂದ ಅವರಿಗಾಗಿ ಬೇರೆ ಉಪಹಾರವನ್ನು ತಂದರು. ಅವರು ನಮ್ರತೆಯಿಂದ ನಕ್ಕು ನಿರಾಕರಿಸಿದರು— ಹಾಗೂ ತನ್ನ ಎಡಬಲದಲ್ಲಿ ದುಡಿಯುತ್ತಿರುವ ಸ್ವಯಂಸೇವಕರು ನೀಡಿದ ನೆಲೆಗಡ್ಲೆಯನ್ನು ಮಾತ್ರ ಬಿಡಲಿಲ್ಲ. ಮೊನ್ನೆ ನೈನಿ ಜೇಲಿನಲ್ಲಿ ತಮಗೆ (ಅ) ವರ್ಗದ ಆಹಾರವು ಸಿಕ್ಕುತ್ತಿದ್ದರೂ ಅವರು ಇತರರಂತೆ ಕಡಿಮೆ ತರಗತಿಯ ಆಹಾರವೇ ಬೇಕೆಂದು ಹೇಳಿದರು. ಮನೆಯಿಂದ ತಾಯ್ತಂದೆಗಳು ಅಕ್ಕರೆಯಿಂದ ಕಳುಹಿದ ಹಣ್ಣು ಹಂಪಲಗಳನ್ನು ಬೇಡವೆಂದು ಹೇಳಿದರಂತೆ! ಕೊಂಗ್ರೆಸಿನ ಕೊನೆಯ ದಿನ ಸ್ವಾತಂತ್ರ್ಯದ ನಿರ್ಣಯವಾದ ಕೂಡಲೆ ಸ್ವಯಂಸೇವಕರು ಮಾಡಿದ ಸಮಾರಂಭಕ್ಕೆ ನಡುರಾತ್ರಿಯಲ್ಲಿ ಹೋಗಿ ಗೆಲುವಿನ ಗಾಯನ ಮಾಡುತ್ತಿದ್ದದ್ದನ್ನು ನೋಡಿ ಅನೇಕರಿಗೆ ಅವರ ನಿಗರ್ವ ಭಾವದ ಬಗ್ಗೆ ಆನಂದವಾಯಿತಂತೆ !

ಸಂಕಟವೂ ತಾನೂ ಒಡಹುಟ್ಟಿದವರೆಂದೂ ತಾನು ಸಂಕಟದ ಹಿರಿಯಣ್ಣನೆಂದೂ ಜೂಲಿಯಸ್ ಸೀಜರನು ಹಗಲೆಲ್ಲ ಹೇಳುವನಂತೆ. ಅದರಂತೆ ನಮ್ಮ ನಾಯಕರಿಗೆ ಯಾತರ ಬೆಚ್ಚೂ ಇಲ್ಲ. ಹೆದರಿಕೆಯೆಂದರೆ ಅದೆಂಥ ಪದಾರ್ಥವೆಂದು ಕೇಳುವವರಲ್ಲಿ ಅವರೊಬ್ಬರು. ಕುದುರೆಯ ಸವಾರಿಯ ಏರಾಟದಲ್ಲಿ ಇವರು ನಿರ್ಭಯರೂ ನಿಷ್ಣಾತರೂ ಆಗಿರುವರು. ಲಾಹೋರದಲ್ಲಿ ಕುದುರೆಯ ಸವಾರಿಯಿಂದಲೇ ಅವರ ಮೆರೆವಣಿಗೆ ನಡೆಯಿತು. ಮೊನ್ನೆ ಮೊನ್ನೆ ನಡೆದ ಸಂಧಾನಪ್ರಸಕ್ತಿಯಲ್ಲಿ ಅವರು ಮಹಾತ್ಮರಿಗೆ ಬರೆದ ಒಂದು ಕಾಗದದಲ್ಲಿ, "ತಾನು ಸದಾಯೋಧನು, ಸಮರಸಂಭ್ರಮವು ತನಗೆ ಹೆಚ್ಚು" ಎಂಬದಾಗಿ ಹೇಳಿದ್ದಾರೆ. ಎಂಥ ಎಡರುಗಳೂ ಅವರ ತಲೆಯನ್ನು ತಗ್ಗಿಸವು !

೧೯೨೦ ರಲ್ಲಿ ಸ್ವೀಕರಿಸಿದ ತತ್ತ್ವಗಳನ್ನು ಅವರು ಇಂದಿಗೂ ತ್ಯಜಿಸಿಲ್ಲ. ಅವರ ಹಿರಿಯರಾದರೂ ಇತರರಂತೆ ತತ್ತ್ವಶೈಥಿಲ್ಯವನ್ನು ತೋರಿಸಿ ಪ್ರವಾಹ ಪತಿತರಾದವರು. ನಾನು ನೀನೆಂಬವರು ಸಹ ತಮ್ಮ ವಿಚಾರಗಳಿಂದ ಚಲಿಸಿದರು. ತಾವು ನಿರ್ಣಯಿಸಿ ಸ್ವೀಕರಿಸಿದ ಸಿದ್ಧಾಂತಗಳ ಸಮರ್ಥನೆಯಲ್ಲಿ ಅವರು ಯಾರ ನ್ನೂ ಲೆಕ್ಕಿಸುವುದಿಲ್ಲ. ಅವರಿಗೆ ಯಾರ ಪರಿವೆಯೂ ಇಲ್ಲ. ತತ್ತ್ವಗಳಿಗೆ ಬೇಕಾದುದು ಅನುಸಂಧಾನ. ಅಲ್ಲಿ ಸಂಧಾನವಿಲ್ಲೆಂದು (Compromise) ಅವರ ಸಿದ್ಧಾಂತ.

ಅವರ ಓರಣೆಯನ್ನೂ (ಶಿಸ್ತು) ಸ್ಥಿರಣೆಯನ್ನೂ ಬಣ್ಣಿಸಲಳವಲ್ಲ. ತಾನು ನೇಮ ನಿರ್ಬಂಧಗಳಂತೆ ನಡೆಯುವರು. ಇತರರನ್ನು ಅದರಂತೆ ನಡೆಸ ಹಚ್ಚುವವರು. ಸ್ನಾನ, ಭೋಜನ, ನೂಲುವುದು, ಆಡುವುದು, ಎಲ್ಲವೂ ಯಥಾಕಾಲಕ್ಕೆ. ಎಲ್ಲ ಕೆಲಸವನ್ನು ತಾನೇ ಕಂಡು ಮಾಡುವರು. ಕಸಗುಡಿ ಸುವುದು, ಬಟ್ಟೆಯೊಗೆಯುವುದು ಇವನ್ನೆಲ್ಲ ಸ್ವತಃ ಮಾಡುವರು. ಇಂದಿನ ಕೆಲಸ ಮುಂದಿನ ದಿನಕ್ಕಿಡುವ ಪಾಠ ಅವರು ಕಲಿತಿಲ್ಲ. ಅವರು ಮಾಡಿದ ಕೊಂಗ್ರೆಸಿನ ಕಾರ್ಯದರ್ಶಿಯ ಕೆಲಸವೇ ಇದಕ್ಕೆಲ್ಲ ಸಾಕ್ಷಿ. ಅಸಹಕಾರತೆಯ ಸಮಯದಲ್ಲಿ ಅವರನ್ನು ಪೋಲೀಸರು ಹಿಡಿಯಲಿಕ್ಕೆ ಬಂದಾಗ ೧೦-೧೫ ನಿಮಿ ಷಗಳ ಪುರಸತ್ತು ಕೊಟ್ಟರು. ಇಂಥ ಕಾಲದಲ್ಲಿ ಜವಾಹರಲಾಲರು ಸಂಸಾರದ ಕೆಲಸಗಳಿಗೆ ಮನಗೊಡಲಿಲ್ಲ. ಅಗತ್ಯದ ಪತ್ರ ವ್ಯವಹಾರಗಳನ್ನು ಬರೆದು ಬಿಟ್ಟು ಕೊಂಗ್ರೆಸ್ ಕಾರ್ಯದರ್ಶಿಯ ಕೆಲಸವನ್ನು ಅಂದಿನ ವರೆಗೆ ಸಂಪೂರ್ಣ ಮಾಡಿ ದರು. ಅಂಥ ಕಾರ್ಯದಕ್ಷತೆ ಅವರದು.

ಶೆಲಿ, ಕೀಟ್ಸ್, ಬಾಯರನ್, ಬರ್ಟ್ರಾಂಡ್, ರಸೆಲ್ ಇವರು ಜವಾಹರ ಲಾಲರ ಪ್ರೀತಿಯ ಗ್ರಂಥಕಾರರು. ೧೯೧೯ ರಲ್ಲಿದ್ದ "ಇಂಡಿಪೆಂಡೆಂಟ್" ಪತ್ರಿಕೆಗೆ ಅವರು ಡೈರೆಕ್ಟರರಾಗಿದ್ದು ಅನೇಕ ಲೇಖನಗಳನ್ನು ಬರೆಯುತ್ತಿದ್ದರು. 'ಸೊವಿಯೆಟ್ ರಶಿಯಾ' ಮತ್ತು 'ಲೆಟರ್ಸ ಫ್ರೊಮ್ ಎ ಫಾದರ ಟು ಹಿಜ್ ಡಾಟರ್' ಇವೆರಡು ಅವರ ಪ್ರಸಿದ್ಧ ಗ್ರಂಥಗಳು. ಎರಡನೇ ಗ್ರಂಥದಲ್ಲಿ ಅವರು ಸೃಷ್ಟಿಶಾಸ್ತ್ರ, ಖಗೋಲಶಾಸ್ತ್ರದಂಥ ಗಹನವಿಷಯಗಳನ್ನು ತಮ್ಮ ೮-೧೦ ವರ್ಷದ ಮಗಳಾದ ಇಂದಿರೆಗೆ ಸಹ ಚೆನ್ನಾಗಿ ತಿಳಿಯುವಂತೆ ಸುಲಭವಾಗಿ ಬರೆದಿರುವರು.

ಇಮು ಇಿಗ ಪತ್ರಗಳ ಒಂದು ಪುಸ್ತಕ. ಇವೆರಡು ಪುಸ್ತಕಗಳಿಂದ ಅವರ ಲೇಖನ ಸಾಮರ್ಥ್ಯವು ತಿಳಿಯುವುದು.

ತಾನು ಹಿಡಿದ ಘನಘೋರವಾದ ಅವಾಢವ್ಯ ಕಾರ್ಯಕ್ಕೆ ಬೇಕಾದ ಸಂಘಟನಾ ಚಾತುರ್ಯವು ಇವರಲ್ಲಿ ಸಂಪೂರ್ಣ ನೆಲೆಸಿದೆ. ಯುವಕ ಸಂಘಗಳ ಚಳವಳ, ಸ್ವಾತಂತ್ರ್ಯ ಸಂಘದ ಕೆಲಸ, ಇವೆಲ್ಲ ಅವರ ಸಂಘಟನಾ ಶಕ್ತಿಯನ್ನೇ ಬಣ್ಣಿಸುತ್ತವೆ. ಇವರು ನಾಮಾಂಕಿತರಾದ ಮಾತುಗಾರರಲ್ಲ. ಆದರೂ ನಿರ್ಮಲಾಂತಃಕರಣದ ಸರಳ ಭಾಷಣದಿಂದ ಅವರು ಕಲ್ಲನ್ನೂ ಕರಗಿಸಬಲ್ಲರು. ಒಬ್ಬ ಬರೆಹಗಾರರು "ತರುಣ ಶರೀರದ ಮೇಲೆ ವೃದ್ಧ ತಲೆಯನ್ನಿಟ್ಟಿರುವ"ರೆಂದು ಅವರ ಹೊಗಳಿಕೆ ಮಾಡಿರುವರು. ಅವರಲ್ಲಿ ಬ್ರಾಹ್ಮಣನ ತ್ಯಾಗವಿದೆ, ಅದರಲ್ಲೊಂದು ಓಜವಿದೆ. ಕ್ಷತ್ರಿಯನ ಕ್ರೋಧವೂ ಇದೆ. ಯೋಧನ ತೋಳ್ಶೇಟಿಯೂ ಇದೆ. ಅವರನ್ನು ಸಭಾಕಾರ್ಯದಲ್ಲಿ ಆಗಲಿ ಕೆಲಸದಲ್ಲಾಗಲಿ ಕೂತಾಗ ನೋಡಿದರೆ ಅವರ ಮುಖದಲ್ಲಿ ನಗೆಯು ಕಳೆಯು ಮಿನುಗುವುದಿಲ್ಲ, ಗಂಭೀರತೆಯು ತೋರುವುದು. ಇಂದಿರೆಯು ಕೊಂಗ್ರೆಸಿನ ಸಭೆಯಲ್ಲಿ ಕೂತಾಗ ನಗುತ್ತ ನಲಿಯುತ್ತ ಬಂದು ಅಜ್ಜನ ತಲೆ ಹಿಡಿದು ಅವರ ಟೊಪ್ಪಿಗೆಯನ್ನು ತೆಗೆಯಬಲ್ಲಳು. ಆದರೆ ತಂದೆಯ ಗೊಡವಿಗೆ ಹೋಗಲಾರಳು.

ಜವಾಹರಲಾಲರಲ್ಲಿ ಗಾಂಧೀ ಲೆನಿನರ ಸಮನ್ವಯವಿದೆ. ಧರ್ಮದ ಬಗ್ಗೆ ಪಕ್ಷಪಾತವಿಲ್ಲ. ಜಾತಿ ಭೇದವಿಲ್ಲ. ಅವರಿಗೆ ವಿಶ್ವಬಂಧುತ್ವ ಬೇಕು.

ಇಂಥ ವೀರಾಧಿವೀರರೂ ರಾಷ್ಟ್ರದ ಮುಂದಾಳುಗಳೂ ಆದ ನಮ್ಮ ತರುಣ ನಾಯಕರ ಜಾಜ್ವಲ್ಯವಾದ ಚರಿತ್ರೆಯು ಅನುದಿನವೂ ಸರಕಾರದೊಡನೆ ನಡೆವ ಸೆಣಸಾಟಸಂಘರ್ಷಣಗಳಿಂದ ಬಂಧುರವಾಗಿ ಬೆಳೆಯುತ್ತಿದೆ. ಮತ್ತೊಮ್ಮೆ, ಇದಕ್ಕಿಂತಲೂ ಹೊಸಹೊಸದಾದ ಮಿಗಿಲಾದ ಹುರುಪಿನ ಚರಿತ್ರೆಯನ್ನು ಓದುಗರಿಗೊದವಿಸಿಕೊಡುವ ಭಾಗ್ಯವು ಬರಲೆಂದು ಆ ನಾಡದೇವಿಯಲ್ಲಿ ಬೇಡುವೆನು.